ನೆಹರೂ ಬಾಲ ಪುಸ್ತಕಾಲಯ

# ಸ್ವರ್ಗಕ್ಕೆ ಸವಾರಿ ಮತ್ತು ಇತರ ಕಥೆಗಳು

ಲೀಲಾವತಿ ಭಾಗವತ್

ಚಿತ್ರಗಳು

ಜತಿನ್ ದಾಸ್

ಅನುವಾದ

ಯು.ಆರ್. ಅನಂತಮೂರ್ತಿ




ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ



ISBN 81-237-0870-X

ಮೊದಲ ಮುದ್ರಣ : 1970 (*ಶಕ 1892*)
ಐದನೆಯ ಮರು ಮುದ್ರಣ : 2002 (*ಶಕ 1923*)

A Trip to Heaven *(Kannada)*
**ರೂ. 10.00**
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110 016
ಇವರಿಂದ ಪ್ರಕಟಿತ.

# ಸ್ವರ್ಗಕ್ಕೆ ಸವಾರಿ

ಶಂಕರನು ರಾಜನ ಮುಖ್ಯ ಮಾಲಿಯಾಗಿದ್ದನು. ರಾಜನ ತೋಟ ತುಂಬ ದೊಡ್ಡದು. ನಾನಾ ಬಗೆಯ ಬಣ್ಣ ಬಣ್ಣದ ಹೂಗಿಡಗಳಿಂದ, ಹಸಿರು ಮೈದಾನಗಳಿಂದ, ಭವ್ಯವಾಗಿ ನಿಂತ ಎತ್ತರವಾದ ಮರಗಳಿಂದ ಕೂಡಿದ ಈ ತೋಟ ಮೈಲಿಗಟ್ಟಲೆ ಹಬ್ಬಿಕೊಂಡಿತ್ತು. ಇದರಿಂದಾಗಿ ಮಾಲಿಯು ಬೆಳಗಿನಿಂದ ಸಂಜೆಯ ತನಕ ತೋಟದಲ್ಲಿ ಕೆಲಸಮಾಡಬೇಕಾಗಿತ್ತು. ಉದುರಿದ ಎಲೆಗಳನ್ನು ಗುಡಿಸುವುದು, ಸಸಿಗಳನ್ನು ಆರೈಕೆ ಮಾಡುವುದು, ಕಳೆಕೀಳುವುದು, ಹೂಗಿಡಗಳಿಗೆ ನೀರು ಹಾಕುವುದು, ಮಣ್ಣನ್ನು ತಿರುವಿಹಾಕುವುದು, ಗೊಬ್ಬರ ಹಾಕಿ ಮಣ್ಣನ್ನು ಹದಮಾಡುವುದು, ಬೇಲಿಯನ್ನು ಕತ್ತರಿಸಿ ಒಪ್ಪ ಮಾಡುವುದು—ಇವೇ ಅವನ ಕೆಲಸವಾಗಿತ್ತು. ಅವನ ಗುಡಿಸಲು ತೋಟದ ಒಂದು ಮೂಲೆಯಲ್ಲಿದ್ದುದರಿಂದ ಅವನು ಸದಾ ತೋಟವನ್ನು ಕಾಯಬಹುದಾಗಿತ್ತು.

ಒಂದು ದಿನ ರಾತ್ರಿ ಶಂಕರನಿಗೆ ನಿದ್ದೆಯೇ ಬರಲಿಲ್ಲ. ನಡುರಾತ್ರಿಯ ತನಕ ಒದ್ದಾಡಿದ, ಹೊರಳಾಡಿದ, ಆ ಮೇಲೆ ಎದ್ದು ಸುಮ್ಮನೆ ಕಿಟಕಿಯ ಹೊರಗೆ ನೋಡಿದ. ಅವನಿಗೆ ತನ್ನ ಕಣ್ಣುಗಳನ್ನೇ ನಂಬಲಾಗಲಿಲ್ಲ! ತನ್ನ ಕಣ್ಣುಗಳೇ ತನಗೆ ಮೋಸಮಾಡುತ್ತಿರಬೇಕು! ಖಂಡಿತವಾಗಿ! ಪುನಃ ನೋಡಿದ. ಹಾಲು ಚೆಲ್ಲಿದಂತಹ ಬೆಳದಿಂಗಳಲ್ಲಿ ಒಂದು ದೊಡ್ಡ ಬಿಳಿಯ ಆನೆ ಸದ್ದಿಲ್ಲದೆ ಹಸಿರು ಹುಲ್ಲನ್ನು ತಿನ್ನುತ್ತಿತ್ತು.

ಶಂಕರನಿಗೆ ತುಂಬ ಆಶ್ಚರ್ಯವಾಯಿತು. ಎಲ್ಲಿಂದ ಈ ಆನೆ ಬಂದಿರಬಹುದು? ಅಲ್ಲದೆ ಅದರ ಬಣ್ಣ ಬಿಳಿ; ಬಿಳಿ ಬಣ್ಣದ ಆನೆಯನ್ನಂತೂ ಅವನೆಂದೂ ಕಂಡಿದ್ದಿಲ್ಲ. ತಕ್ಷಣ ಅವನಿಗೆ ನೆನಪಾಯಿತು; ತಾನು ಚಿಕ್ಕವನಾಗಿದ್ದಾಗ ತಾಯಿ ಸ್ವರ್ಗಲೋಕದಲ್ಲಿರುವ ದೇವತೆಗಳ ಕಥೆ

ಗಳನ್ನು ಹೇಳುತ್ತಿದ್ದಳು. ಆ ದೇವತೆಗಳ ದೊರೆ ಇಂದ್ರ; ಅವನ ವಾಹನ ಐರಾವತ ಎಂಬ ಸುಂದರವಾದ ಆನೆ, ಅದರ ಮೈಬಣ್ಣ ಹಾಲಿನಷ್ಟು ಬಿಳಿ.

ಶಂಕರ ಆನಂದ ಆಶ್ಚರ್ಯಗಳಿಂದ ಈ ರೀತಿ ಯೋಚಿಸಿದ: "ಖಂಡಿತವಾಗಿ ಈ ಆನೆ ಐರಾವತ, ರುಚಿಕರವಾದ ಆಹಾರಗಳಿಂದ ಬೇಸರವಾಗಿ, ಸ್ವರ್ಗದಿಂದ ಭೂಲೋಕಕ್ಕೆ ಇಳಿದು ಬಂದಿರಬೇಕು. ನಾನು ಅದರ ಬಾಲವನ್ನು ಬಿಗಿಯಾಗಿ ಹಿಡಿದುಕೊಳ್ಳಲು ಸಾಧ್ಯವಾದರೆ, ಅದರ ಜೊತೆ ದೇವ ಲೋಕಕ್ಕೆ ಹೋಗಬಹುದು. ಅಲ್ಲಿನ ಅದ್ಭುತಗಳನ್ನೆಲ್ಲ ಕಣ್ಣಾರೆ ಕಾಣಬಹುದು."

ಶಂಕರನು ಹಾಸಿಗೆಯಿಂದ ಹಾರಿ, ಹೆಂಡತಿಗೆ ಎಚ್ಚರವಾಗಬಾರದೆಂದು ತುದಿಗಾಲಿನಲ್ಲಿ ನಡೆದು ಮನೆಯಿಂದ ಹೊರಕ್ಕೆ ಬಂದು, ಸದ್ದಾಗದಂತೆ ಆನೆಯ ಕಡೆ ಓಡಿದ.

ಒಂದು ಮರದ ಹಿಂದೆ ಅವಿತುಕೊಂಡು, ಆನೆಯನ್ನು ಗಮನಿಸಿದ, ಹುಲ್ಲನ್ನು ತಿಂದ ಮೇಲೆ ಅದು ಸಸಿಗಳ ಎಲೆಗಳ ರುಚಿ ನೋಡಿ ಅರ್ಧ ಕಳಿತಿದ್ದ ಮಾವಿನ ಹಣ್ಣುಗಳನ್ನು ತಿನ್ನಲು ಪ್ರಾರಂಭಿಸಿತು. ಶಂಕರ ತುಟಿ ಪಿಟ್ಟಕ್ಕೆನ್ನದೆ ನೋಡಿದ. ತಾನು ಗದರಿಸಿದರೆ ಎಲ್ಲಿ ಆನೆಗೆ ಕೋಪ ಬಂದು ಬಿಡುತ್ತದೊ, ದೇವಲೋಕದ ಯಾತ್ರೆ ತಪ್ಪುತ್ತದೊ ಎಂದು ಅವನಿಗೆ ದಿಗಿಲು.

ಇನ್ನೇನು ಬೆಳಗಾಗುತ್ತದೆ ಎನ್ನುವಾಗ ಆನೆ ತನ್ನ ಊಟ ಮುಗಿಸಿತು. ತೃಪ್ತಿಯಿಂದ ಸೊಂಡಿಲನ್ನೆತ್ತಿ ಘೀಳಿಟ್ಟಿತು. ಇನ್ನು ಆನೆ ಹೊರಟು ಬಿಡುತ್ತದೆಂದು ಶಂಕರನಿಗೆ ಗೊತ್ತಾಗಿ, ಓಡಿ ಅದರ ಬಾಲ ಹಿಡಿದುಕೊಂಡ. ಐರಾವತ ಹೆಲಿಕಾಪ್ಟರಿನಂತೆ ನೆಲಬಿಟ್ಟು ಮೇಲಕ್ಕೆದ್ದಿತು. ಬಲು ಬೇಗನೆ ಮೋಡಗಳ ನಡುವೆ ಹಾರಿಹೋಯಿತು. ಬಹಳ ಎಚ್ಚರಿಕೆಯಿಂದ ಶಂಕರ ಕೆಳಗೆ ನೋಡಿದ. ರಾಜನ ತೋಟ ಧೂಳಿನ ಕಣದಷ್ಟು ಸಣ್ಣದಾಗಿ ಕಂಡಿತು. ಶಂಕರ ಬಿಳಿಚಿಕೊಂಡು ಬೆವರಿಬಿಟ್ಟ. ಆದರೆ ಅಷ್ಟರಲ್ಲೆ ಅವರು ಸ್ವರ್ಗಲೋಕವನ್ನು ತಲುಪಿಬಿಟ್ಟಿದ್ದರು. ಶಂಕರ ಐರಾವತದ ಬಾಲವನ್ನು ಬಿಟ್ಟು ಸುತ್ತಲೂ ನೋಡಿದ.

ಆಶ್ಚರ್ಯದಿಂದ ಅವನ ಕಣ್ಣುಗಳು ಅರಳಿಕೊಂಡವು. "ಇದೇ ಸ್ವರ್ಗ, ನಂದನ ವನ", ಖುಷಿಯಿಂದ ಅವನು ಹಿಗ್ಗಿದ, "ಈ ಮರಗಳು ಎಷ್ಟು ಎತ್ತರ, ಎಷ್ಟು ಸುಂದರ! ಇಂದ್ರನ ಮಾಲಿ ಯಾವ ಗೊಬ್ಬರ ಹಾಕಿ ಇವುಗಳನ್ನು ಬೆಳೆಸಿದನೊ?" ಶಂಕರ ಅಚ್ಚರಿಯಿಂದ ಎಲ್ಲವನ್ನು ನೋಡುತ್ತ ಓಡಾಡಿದ. ಭೂಲೋಕದ ಮರಗಳಿಗಿಂತ ಹತ್ತರಷ್ಟು ಎತ್ತರದ ಮರಗಳು. ಅಲ್ಲಿನವಕ್ಕಿಂತ ಹತ್ತರಷ್ಟು ಸೊಂಪಾಗಿ ಬೆಳೆದ ಎಲೆಗಳು, ಹತ್ತು ಪಟ್ಟು ಹೆಚ್ಚು ರುಚಿಯ ಹಣ್ಣುಗಳು, ಚಂದದ ಹೂಗಳು ಅಲ್ಲಿದ್ದವು. ಶಂಕರ ಆ ಎಲೆಗಳನ್ನು ಮುಟ್ಟಿನೋಡುತ್ತ, ಕಣ್ಣಿಗೆ ಹಬ್ಬವಾದ ಆ ಹೂಗಳಿಂದ ಸುಖಪಡುತ್ತ ರಸಭರಿತವಾದ ರುಚಿಯಾದ ಆ ಹಣ್ಣುಗಳನ್ನು ಸವಿಯುತ್ತ ಇಡೀ ದಿನವನ್ನು ಕಳೆದ.

ಸಂಜೆಯಾಗುತ್ತಿದ್ದಂತೆ ತನ್ನ ಹೆಂಡತಿ ತನ್ನ ಬಗ್ಗೆ ತವಕಪಡುತ್ತಿರಬಹುದೆಂದು ಅವನಿಗೆ ತಟ್ಟನೆ ಯೋಚನೆಯಾಯಿತು. ಸ್ವರ್ಗದಿಂದ ಒಂದು ಬಹುಮಾನವನ್ನು ಅವಳಿಗೆ ತೆಗೆದುಕೊಂಡು ಹೋಗಬೇಕೆಂದು ನಿಶ್ಚಯಿಸಿದ.

ಅವಳಿಗಾಗಿ ತೆಂಗಿನಕಾಯಿಯಷ್ಟು ದೊಡ್ಡದಾದ ಒಂದು ಅಡಕೆ. ಬಾಳೆಯೆಲೆಯಷ್ಟು ಅಗಲವಾದ ಒಂದು ವೀಳೆಯದೆಲೆಯನ್ನು ತೆಗೆದುಕೊಂಡ. ರಾತ್ರಿಯಾದ ಕೂಡಲೇ ಆನೆ ಘೀಳಿಟ್ಟಿತು. ಅದರ ಭೂಮಿಗೆ ಮರಳುವ ವೇಳೆಯಾಯಿತು. ಓಡಿಹೋಗಿ ಶಂಕರ ಆನೆಯ ಬಾಲವನ್ನು ಹಿಡಿದುಕೊಂಡ. ಕೆಲವೆ ನಿಮಿಷಗಳಲ್ಲಿ ಶಂಕರ ರಾಜನ ತೋಟಕ್ಕೆ ಹಿಂದಿರುಗಿ ಬಂದಿದ್ದ. ತನಗಾಗಿ ತವಕದಿಂದ ಕಾಯುತ್ತಿದ್ದ ಹೆಂಡತಿಯನ್ನು ನೋಡಲೆಂದು ಕೂಡಲೆ ಮನೆಗೆ ಓಡಿದ.

"ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದಿರಿ?" ಅವಳು ಕೋಪದಿಂದ ಕೇಳಿದಳು.

ಶಂಕರ ಸಮಾಧಾನಪಡಿಸುವ ಧ್ವನಿಯಲ್ಲಿ ಹೇಳಿದ. "ಸಿಟ್ಟಾಗಬೇಡ. ಇಕೋ ನೋಡು. ನಿನಗೆ ನಾನು ಏನು ತಂದಿದ್ದೇನೆ" ಎಂದು ವೀಳೆಯದೆಲೆ ಮತ್ತು ಅಡಿಕೆಯನ್ನು ಅವಳಿಗೆ ತೋರಿಸಿದ.

ಲಕ್ಷ್ಮಿಗೆ ಅತ್ಯಾಶ್ಚರ್ಯವಾಯಿತು. "ಇಷ್ಟೊಂದು ಗಾತ್ರದ ಎಲೆಯಡಿಕೆ ನಿಮಗೆಲ್ಲಿ ಸಿಕ್ಕಿತು?" ಎಂದು ಅವಳು ಕಾತುರದಿಂದ ಪ್ರಶ್ನಿಸಿದಳು.

"ಎಲ್ಲಿಂದ ಅಂದರೆ ಸ್ವರ್ಗದಿಂದ" ನಡೆದ ಎಲ್ಲ ಕಥೆಯನ್ನು ಶಂಕರ ಅವಳಿಗೆ ಹೇಳಿದ. ಮೊದಮೊದಲು ಅವಳು ಅವನ ಮಾತನ್ನು ನಂಬದಿದ್ದರೂ. ಅವಳ ಕಣ್ಣೆದುರೇ ಅಷ್ಟೊಂದು ಭರ್ಜರಿ ಗಾತ್ರದ ಎಲೆಯಡಿಕೆ ಇದ್ದುವಲ್ಲ! ಕೊನೆಗೂ ಅವಳು ನಂಬಲೇಬೇಕಾಯಿತು. ಶಂಕರ ಅವಳಿಗೆ ಎಚ್ಚರಿಕೆ ಹೇಳಿದ. ಇದನ್ನು ನೀನು ಗುಟ್ಟಾಗಿ ಇಡು. ಒಂದು ವಾರಕ್ಕೆ ಸಾಕು ನಮಗೆ ಈ ಅಡಕೆ. ಆದರೆ ಯಾರಿಗೂ ಈ ಗುಟ್ಟನ್ನು ತಿಳಿಸಕೂಡದು.

ಲಕ್ಷ್ಮಿ ಒಪ್ಪಿಕೊಂಡಳು—ಆದರೆ ಮಾತು ಕೊಟ್ಟಂತೆ ಅವಳಿಗೆ ನಡೆದುಕೊಳ್ಳುವುದು ಸಾಧ್ಯವಾಗಲಿಲ್ಲ. ಹೆಂಗಸಾದ್ದರಿಂದ ಅವಳಿಗೆ ಮಾತನ್ನಾಡುವ ಬಯಕೆ. ಮತ್ತೊಮ್ಮೆ ದೇವಲೋಕಕ್ಕೆ ಹೋಗಿ ಶಂಕರ ತುಂಬ ರಸಭರಿತವಾದ ದೊಡ್ಡ ಹಣ್ಣೊಂದನ್ನು ತಂದ ಮೇಲಂತೂ ತನ್ನ ಸ್ನೇಹಿತರಿಗೆ ತಮ್ಮ ಈ ಅದೃಷ್ಟವನ್ನು ಹೇಳಿಕೊಳ್ಳಲು ಮತ್ತಷ್ಟು ಕಾತುರಳಾದಳು.

ಆದರೂ ತುಂಬ ಪ್ರಯಾಸದಿಂದ ತನ್ನ ಮನಸ್ಸನ್ನು ಬಿಗಿ ಹಿಡಿದಳು. ಪುನಃ ಅವಳ ಗಂಡ ಮೂರನೆಯ ಸಾರಿ ದೇವಲೋಕಕ್ಕೆ ಹೋಗಿ ಒಂದು ದೈತ್ಯಾಕಾರದ ಹೂವನ್ನು ತಂದನು. ಅದರ ಸುವಾಸನೆ ಇಡಿ ಗುಡಿಸಲನ್ನು ಆವರಿಸಿತು.

"ನೀನು ಎಷ್ಟು ಒಳ್ಳೆಯ ಸುಗಂಧವನ್ನು ಉಪಯೋಗಿಸುತ್ತಿದ್ದೀಯ. ನಿನಗೆ ಅದು ಎಲ್ಲಿಂದ ಸಿಕ್ಕಿತು?" ಎಂದು ಅವಳ ಒಬ್ಬ ಸ್ನೇಹಿತಳು ಕೇಳಿದಳು.

ಅದಕ್ಕೆ ಲಕ್ಷ್ಮಿ "ನಾನು ಯಾವ ಸುಗಂಧವನ್ನೂ ಉಪಯೋಗಿಸುತ್ತಿಲ್ಲ. ನಮ್ಮ ಮನೆಯಲ್ಲಿರುವ ದೊಡ್ಡ ಹೂವಿನ ವಾಸನೆ ಅದು" ಎಂದು ಹೇಳಿಬಿಟ್ಟಳು.

ಅವಳ ಸ್ನೇಹಿತಳು ಒತ್ತಿ ಒತ್ತಿ ಕೇಳಿದ್ದರಿಂದ ಲಕ್ಷ್ಮಿ ಅವಳಿಗೆ ಇಡೀ ಕಥೆಯನ್ನು ಹೇಳಬೇಕಾಯಿತು. ಯಾರಿಗೂ ತನ್ನ ಈ ರಹಸ್ಯವನ್ನು ಬಯಲುಮಾಡಕೂಡದೆಂದು ಲಕ್ಷ್ಮಿ ಅವಳಿಂದ ಭಾಷೆ ತೆಗೆದುಕೊಂಡಳು.

ಗೆಳತಿ ಇದಕ್ಕೆ ಒಪ್ಪಿದಳು—ಆದರೆ ಅವಳು ಮಾತಿನ ಮಲ್ಲಿಯಾದ್ದರಿಂದ ಗುಟ್ಟನ್ನು ಮುಚ್ಚಿಟ್ಟುಕೊಳ್ಳಲು ಅವಳಿಗೆ ಸಾಧ್ಯವಾಗಲಿಲ್ಲ. ಆದ್ದರಿಂದ ಯಾರಿಗೂ ಈ ಗುಟ್ಟನ್ನು ಹೇಳಕೂಡದೆಂದು ಭಾಷೆ ತೆಗೆದುಕೊಂಡು ಅವಳು ತನ್ನ ಆಪ್ತ ಗೆಳತಿಗೆ ಈ ವಿಷಯ ತಿಳಿಸಿದಳು. ಅವಳ ಆಪ್ತ ಗೆಳತಿಯೂ ಇದಕ್ಕೆ ಒಪ್ಪಿದಳು. ಆದರೆ ಅವಳೂ ಕೂಡ ತನ್ನ ಗೆಳತಿಯೊಬ್ಬಳಿಗೆ ಹೀಗೆಯೇ ಭಾಷೆ ತೆಗೆದುಕೊಂಡು ಗುಟ್ಟನ್ನು ಹೇಳಿದಳು. ಹೀಗೆ ಗುಟ್ಟು ಒಬ್ಬರಿಂದ ಒಬ್ಬರಿಗೆ ದಾಟಿ ಕೊನೆಗೆ ಊರಿನ ಹೆಂಗಸರಿಗೆಲ್ಲ ಗೊತ್ತಾಯಿತು. ಮತ್ತು ಈ ಹೆಂಗಸರೆಲ್ಲ ತಮ್ಮ ಗಂಡಂದಿರಿಗೂ ಗುಟ್ಟನ್ನು ತಿಳಿಸಿದ್ದರಿಂದ, ಇಡೀ ಊರಿಗೆ ಶಂಕರನ ರಹಸ್ಯ ಬಯಲಾಯಿತು.

ಒಂದು ಬೆಳಿಗ್ಗೆ ಊರಿನ ಎಲ್ಲ ಗಂಡಸರೂ ಹೆಂಗಸರೂ ಶಂಕರನ ಗುಡಿಸಲನ್ನು ಮುತ್ತಿದರು. ತಮ್ಮನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗಬೇಕೆಂದು ಅವನಿಗೆ ದುಂಬಾಲುಬಿದ್ದರು.

ಶಂಕರ ಹೆಂಡತಿಯ ತಿಳಿಗೇಡಿತನದಿಂದ ರೇಗಿದ. ಆದರೆ ಅವನು ತಾನೆ ಏನು ಮಾಡಿಯಾನು? ಆದ್ದರಿಂದ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿದ. "ಈ ರಾತ್ರಿ ಎಲ್ಲರೂ ರಾಜನ ತೋಟದಲ್ಲಿ ಸೇರಬಹುದು. ಆದರೆ ಎಲ್ಲರೂ ಸದ್ದಿಲ್ಲದಂತೆ ನಿಂತಿರಬೇಕು" ಎಂದು ಅವರಿಗೆ ಹೇಳಿದ.

ಆ ರಾತ್ರಿ ರಾಜನ ತೋಟ ನೋಡಲು ಒಂದು ವಿಚಿತ್ರ ದೃಶ್ಯವಾಗಿತ್ತು. ಮರಗಳ ಸಂಖ್ಯೆಗಿಂತ ಹೆಚ್ಚಾಗಿ ಗಂಡಸರು, ಹೆಂಗಸರು ಅಲ್ಲಿದ್ದರು. ಆದರೆ ಮರಗಳು ಗಾಳಿಗೆ ಅಲುಗಾಡುತ್ತಿದ್ದರೆ, ಮನುಷ್ಯರು ಮಾತ್ರ ಅಮೃತಶಿಲೆಯಲ್ಲಿ ಕೊರೆದಿಟ್ಟ ಪ್ರತಿಮೆಗಳಂತೆ ಸ್ತಬ್ಧರಾಗಿ ನಿಂತಿದ್ದರು. ಐರಾವತ ಕಾಣಿಸಿಕೊಂಡಾಗಲೂ ಅವರೆಲ್ಲಾ ಅಚಲರಾಗಿದ್ದರು ಮತ್ತು ಮೌನದಿಂದಿದ್ದರು.

ಬೆಳಗಾಗುತ್ತಿದ್ದಂತೆ, ಶಂಕರನು ಮೆತ್ತಗೆ ಸನ್ನೆ ಮಾಡಿ ಕರೆದನು: ಧಾವಿಸಿ ಆನೆಯ ಬಾಲವನ್ನು ಹಿಡಿದುಕೊಂಡನು. ಲಕ್ಷ್ಮಿ ತನ್ನ ಗಂಡನ ಕಾಲನ್ನು, ಲಕ್ಷ್ಮಿಯ ಕಾಲುಗಳನ್ನು ಅವಳ ಗೆಳತಿ

ಗೆಳತಿಯು ಕಾಲುಗಳನ್ನು ಅವಳ ಗಂಡ, ಅವನ ಕಾಲುಗಳನ್ನು ಇನ್ನೊಬ್ಬ, ಆ ಇನ್ನೊಬ್ಬನ ಕಾಲುಗಳನ್ನು ಅವನ ಹೆಂಡತಿ—ಹೀಗೆ ಒಬ್ಬರನ್ನೊಬ್ಬರು ಬಿಗಿಯಾಗಿ ಹಿಡಿದುಕೊಂಡರು. ಬಿಳಿಯ ಐರಾವತ ಮೇಲಕ್ಕೆದ್ದಾಗ, ಅದರ ಜೊತೆ ಸ್ವರ್ಗಕ್ಕೆ ಪ್ರಯಾಣಮಾಡುವ ಗಂಡು ಹೆಣ್ಣುಗಳ ಒಂದು ದೀರ್ಘ ಸರಪಳಿಯೇ ಇತ್ತು.

ಪ್ರಯಾಣದ ಮಧ್ಯದಲ್ಲಿ, ಸರಪಳಿಯ ಕೊನೆಯಲ್ಲಿದ್ದ ಹೆಂಗಸಿಗೆ ಕುತೂಹಲ ತಡೆಯಲಾಗದೆ ತನ್ನ ಗಂಡನಿಗೆ ಹೇಳಿದಳು; "ಸ್ವರ್ಗದ ಹೂವು ಹಣ್ಣುಗಳು ತುಂಬ ದೊಡ್ಡಗಿರುತ್ತವೆಂದು ಲಕ್ಷ್ಮಿ ನಮಗೆ ಹೇಳಿದಳು. ಆದರೆ ಎಷ್ಟು ದೊಡ್ಡಗಿರುತ್ತವೆಂದು ಮಾತ್ರ ತಿಳಿಸಲಿಲ್ಲ. ನಿಮ್ಮ ಮೇಲಕ್ಕಿರುವ ಗೆಳೆಯನನ್ನು ದಯಮಾಡಿ ಕೇಳಿ ಹೇಳುತ್ತೀರ?"

ಅವಳ ಗಂಡ ತನ್ನ ಮೇಲಕ್ಕಿದ್ದವನನ್ನು ಕೇಳಿದ. ಅವನು ತನ್ನ ಹೆಂಡತಿಯನ್ನು ಕೇಳಿದ: ಆಕೆ ತನ್ನ ಮೇಲಕ್ಕಿದ್ದ ಹೆಂಗಸನ್ನು ಕೇಳಿದಳು. ಈ ಹೆಂಗಸು ತನ್ನ ಗಂಡನನ್ನು, ಅವನು ತನ್ನ ಮೇಲಕ್ಕಿದ್ದ ಇನ್ನೊಬ್ಬ ಗಂಡುಸನ್ನು, ಅವನು ತನ್ನ ಮೇಲಿನವನನ್ನು —ಹೀಗೆ ಪ್ರಶ್ನೆ ದಾಟುತ್ತ ಲಕ್ಷ್ಮಿಯ ತನಕ ಬಂದಿತು. ಲಕ್ಷ್ಮಿ ತನ್ನ ಗಂಡನಿಗೆ ಪ್ರಶ್ನೆಯನ್ನು ಕೇಳಿದಳು: "ದೇವಲೋಕದ ಹೂ ಹಣ್ಣುಗಳು ಎಷ್ಟು ದೊಡ್ಡದಾಗಿರುತ್ತವೆಂದು ಇವರೆಲ್ಲ ಕೇಳುತ್ತಿದ್ದಾರೆ......"

ಶಂಕರನಿಗೆ ರೇಗಿತು: "ಸ್ವರ್ಗ ತಲ್ಪಿದ ಮೇಲೆ ನಿಮಗೇ ಗೊತ್ತಾಗುತ್ತೆ" ಎಂದು ಸಂಕ್ಷಿಪ್ತವಾಗಿ ಹೇಳಿದ.

ಆದರೆ ಲಕ್ಷ್ಮಿಯ ಕಾಲುಗಳನ್ನು ಹಿಡಿದುಕೊಂಡಿದ್ದ ಹೆಂಗಸಿಗೆ ಎಷ್ಟು ಆತುರ ಕುತೂಹಲಗಳೆಂದರೆ ಪದೇ ಪದೇ ಲಕ್ಷ್ಮಿಯನ್ನು ಪ್ರಶ್ನೆ ಕೇಳಿ ಪೀಡಿಸಿದಳು. ಆದ್ದರಿಂದ ಲಕ್ಷ್ಮಿ ತನ್ನ ಗಂಡನನ್ನು ಬೇಡಿಕೊಂಡಳು: "ನನ್ನ ಗೆಳತಿಗೆ ಆತುರ. ನಿಮ್ಮ ದಮ್ಮಯ್ಯ. ಸ್ವರ್ಗದ ಹೂವು ಹಣ್ಣು ಎಷ್ಟು ದೊಡ್ಡಗಿರುತ್ತವೆಂದು ನೀವು ತಕ್ಷಣ ತಿಳಿಸಲೇಬೇಕು, ದಯಮಾಡಿ."

ಇವರ ಆತುರ ಪೆದ್ದುತನಗಳಿಂದ ಶಂಕರ ತೀರ ಕೃದ್ಧನಾಗಿ ಹೇಳಿದ: "ಒಂದೊಂದು ಹಣ್ಣೂ ನೆಲದ ಮೇಲಿನ ಹಣ್ಣಿಗಿಂತ ಹತ್ತರಷ್ಟು ದೊಡ್ಡದಾಗಿರುತ್ತದೆ. ನೀನೇ ನೋಡಿದಿಯಲ್ಲ—ಅಡಿಕೆ ಇಷ್ಟು ದೊಡ್ಡಗಿತ್ತಲ್ಲವೆ?......"

ಅಡಿಕೆ ಎಷ್ಟು ದೊಡ್ಡದಾಗಿತ್ತೆಂದು ಕೈಗಳಿಂದ ತೋರಿಸಲು ಶಂಕರ ಆನೆಯ ಬಾಲವನ್ನು ಬಿಟ್ಟ; ಬಿಟ್ಟದ್ದೇ ತಡ......

ಶಂಕರ, ಶಂಕರನ ಕಾಲುಗಳನ್ನು ಹಿಡಿದಿದ್ದ ಲಕ್ಷ್ಮಿ, ಅವಳ ಕಾಲುಗಳನ್ನು ಹಿಡಿದಿದ್ದ ಅವಳ ಗೆಳತಿ, ಗೆಳತಿಯ ಕಾಲುಗಳನ್ನು ಹಿಡಿದಿದ್ದ ಅವಳ ಗಂಡ, ಆತನ ಕಾಲುಗಳನ್ನು ಹಿಡಿದಿದ್ದ ಅವನ ಗೆಳೆಯ—ಹೀಗೆ ಸರಪಳಿಯ ಕಟ್ಟಕಡೆಯ ಮನುಷ್ಯನ ತನಕ ಎಲ್ಲರೂ ನೆಲಕ್ಕೆ ಉದುರಿಬಿದ್ದರು.

ಮುಂದೆ ಯಾವ ಪ್ರಶ್ನೆ ಕೇಳಲು ಯಾರೂ ಬದುಕಿ ಉಳಿಯಲಿಲ್ಲ.



# ಉದಾರವಾದ ಕೊಡುಗೆ

ಒಂದಾನೊಂದು ಕಾಲದಲ್ಲಿ ದಯಾಳುವೂ, ಉದಾರನೂ ಆದ ಒಬ್ಬ ರಾಜನಿದ್ದನು. ತನ್ನ ಪ್ರಜೆಗಳ ಹಿತಚಿಂತಕನಾಗಿದ್ದ ಆ ರಾಜನಿಗೆ ಎಲ್ಲರೂ ಶಾಂತಿ ಸೌಖ್ಯಗಳಿಂದ ಬದುಕಬೇಕೆಂಬುದೂ, ಯಾರಿಗೂ ಗೋಣಗುತ್ತ ಬದುಕಬೇಕಾದ ಪ್ರಮೇಯವಿರಕೂಡದೆಂಬುದೂ ಪ್ರಬಲವಾದ ಇಚ್ಛೆಯಾಗಿದ್ದಿತು. ಆದ್ದರಿಂದ ತನ್ನ ಪ್ರಜೆಗಳ ನಿಜವಾದ ಪರಿಸ್ಥಿತಿ ಏನೆಂಬುದನ್ನು ತಿಳಿಯಲು ಅವನು ವೇಷ ಮರೆಸಿಕೊಂಡು ದೇಶಾದ್ಯಂತ ಸುತ್ತುತ್ತಿದ್ದನು.

ಹೀಗೆ ವೇಷ ಮರೆಸಿಕೊಂಡು ಸುತ್ತುತ್ತಿದ್ದಾಗ ಒಂದು ದಿನ ಅವನೊಂದು ವಿಚಿತ್ರ ದೃಶ್ಯ ವನ್ನು ಕಂಡನು. ಒಬ್ಬ ರೈತನು ಎತ್ತುಗಳಿಗೆ ಬದಲಾಗಿ ನೊಗಕ್ಕೆ ಒಬ್ಬ ಹೆಂಗಸನ್ನು ಕಟ್ಟಿ ತುಂಬ ಬಿರುಸಿನಿಂದ ಹೊಲವನ್ನು ಉಳುತ್ತಿದ್ದನು. ಅರಸನ ರಕ್ತ ಕುದಿಯಿತು; ಅವನಿಗೆ ಕೋಪ ತಡೆಯಲಾಗಲಿಲ್ಲ, ಕಟುವಾಗಿ ಅವನು ರೈತನನ್ನು ಪ್ರಶ್ನಿಸಿದ:

"ಇದೇನು ನೀನು ಮಾಡುತ್ತಿರೋದು? ನಿನ್ನ ಹತ್ತಿರ ಎತ್ತುಗಳಿಲ್ಲವೆ? ಈ ಹೆಂಗಸಿನಿಂದ ಯಾಕೆ ನೇಗಿಲನ್ನು ಎಳೆಸುತ್ತಿದ್ದೀಯ?"

ರೈತನು ನಿಧಾನವಾಗಿ ಉತ್ತರಿಸಿದ: "ಇವಳು ನನ್ನ ಹೆಂಡತಿ."

"ಏನೆಂದೆ? ನಿನ್ನ ಹೆಂಡತಿ !" ರಾಜನು ರೇಗಿ ಕೂಗಾಡಿದ: "ಹೆಂಡತಿಯೆಂದರೆ ಏನೆಂದು ನೀನು ತಿಳಿದಿದ್ದೀಯ? ಗುಲಾಮಳೆಂದೊ? ಅಥವಾ ಒಂದು ಪ್ರಾಣಿಯೆಂದೊ?"

ಅದಕ್ಕೆ ರೈತ ಉತ್ತರಿಸಿದ: "ನಿನಗೆ ಹೀಗೆ ಮಾತಾಡೋದು ಸುಲಭ. ಕುದುರೆಗಳು ಗಾಡಿ ಗಳು ಇರುವ ನಿನ್ನಂಥ ಶ್ರೀಮಂತರಿಗೆ ಬಡತನ ಅಂದರೆ ಏನು ಗೊತ್ತು? ನಾನೆಷ್ಟು ಬಡವ ಅಂದರೆ ನನ್ನ ಎತ್ತುಗಳನ್ನು ಮಾರಬೇಕಾಯಿತು. ಆದರೆ ರೈತ ಬದುಕಬೇಕಾದರೆ ತನ್ನ ಹೊಲವನ್ನು

ಉಳಲೇಬೇಕಲ್ಲವೆ? ಆದ್ದರಿಂದ ಎತ್ತಿನ ಕೆಲಸವನ್ನು ಮಾಡೆಂದು ನನ್ನ ಹೆಂಡತಿಯನ್ನು ಕೇಳಿದ್ದೇನೆ. ಅವಳು ಗೊಣಗದೆ ಒಪ್ಪಿಕೊಂಡಿದ್ದಾಳೆ."

ರಾಜನಿಗೆ ಈ ಉತ್ತರದಿಂದ ತೃಪ್ತಿಯಾಗಲಿಲ್ಲ. "ನಾನು ಇದನ್ನು ತಾಳಲಾರೆ. ನೀನು ಏನೇ ಹೇಳು. ಒಬ್ಬ ಹೆಂಗಸನ್ನು ಹೀಗೆ ದುಡಿಸಿಕೊಳ್ಳುವುದು ಮನುಷ್ಯ ವರ್ತನೆಯಲ್ಲ. ಎತ್ತು ಕೊಳ್ಳುವಷ್ಟು ಹಣವನ್ನು ನಿನಗೆ ನಾನು ಕೊಡುತ್ತೇನೆ. ಆದರೆ ನೀನು ಕೂಡಲೇ ಈ ಹೆಂಗಸನ್ನು ಬಿಡುಗಡೆ ಮಾಡತಕ್ಕದ್ದು" ಎಂದು ರಾಜ ಖಂಡಿತವಾಗಿ ಹೇಳಿದ.

ಈಗ ರೈತನಿಗೂ ಕೋಪ ಬಂತು. "ನನಗೆ ಹಾಗೆ ಮಾಡು. ಹೀಗೆ ಮಾಡು. ಎಂದು ಹೇಳಲು ನಿನಗೆ ಏನು ಅಧಿಕಾರ? ನಿನ್ನ ಹಣವನ್ನು ನಾನು ಯಾಕೆ ತೆಗೆದುಕೊಳ್ಳಲಿ? ನಾನು ಭಿಕ್ಷುಕನಲ್ಲ" ರೈತ ಜೋರಾಗಿ ಮಾತಾಡಿದ.

ರಾಜ ಮೃದುವಾಗಿ ಹೇಳಿದ: "ಅಯ್ಯ ಮೊದಲು ನನ್ನ ತಂಗಿಯನ್ನು ನೇಗಿಲಿಂದ ದಯ ವಿಟ್ಟು ಬಿಚ್ಚು"

ರೈತ ತಿರಸ್ಕಾರದಿಂದ ನಕ್ಕ. "ಏನೋ ಮಹಾ ತಂಗಿಯೆನ್ನುತ್ತೀಯಲ್ಲ. ನಿನಗೆ ಅಷ್ಟು ಕನಿಕರ ಅವಳ ಮೇಲಿದ್ದರೆ ನೀನೇ ಏಕೆ ಅವಳ ಜಾಗಕ್ಕೆ ಬರಬಾರದು. ಒಪ್ಪುತ್ತೀಯಾ ಹೇಳು. ಕೂಡಲೇ ನಾನಿವಳನ್ನು ನೇಗಿಲಿನಿಂದ ಬಿಚ್ಚುತ್ತೇನೆ."

ರಾಜ ಕೂಡಲೇ ಒಪ್ಪಿಬಿಟ್ಟ. ರೈತ ಬೇರೆ ಮಾರ್ಗ ಕಾಣದೆ. ತನ್ನ ಹೆಂಡತಿಯನ್ನು ಬದಲಿಗೆ ರಾಜನನ್ನೇ ನೊಗಕ್ಕೆ ಕಟ್ಟಬೇಕಾಯಿತು. ರಾಜನು ನೇಗಿಲನ್ನು ಎಳೆಯಲಾರಂಭಿಸಿದ. ಆದರೆ ಅವನಿಗೆ ದೈಹಿಕ ದುಡಿಮೆ ಅಭ್ಯಾಸವಿಲ್ಲದ್ದರಿಂದ ಹೊಲದಲ್ಲಿ ಸ್ವಲ್ಪ ಭಾಗವನ್ನು ಸರಿಯಾಗಿ ಉಳುವುದು ಸಾಧ್ಯವಾಗಲಿಲ್ಲ. ಕೊಯಿಲಿನ ಹೊತ್ತಿಗೆ ಆ ಜಾಗದಲ್ಲಿ ತೆನೆ ತುಂಬಿರಲಿಲ್ಲವೆಂಬುದು ರೈತನಿಗೆ ಗೊತ್ತಾಯಿತು.

ರೈತನಿಗೆ ತನ್ನ ಹೆಂಡತಿಯ ಮೇಲೆ ಕೋಪಬಂತು. "ನಿನ್ನ ಅಣ್ಣನೆಂದು ಕರೆಸಿಕೊಂಡವನು ಮಾಡಿರುವ ಕೆಲಸ ನೋಡು. ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ಅವನು ಕೆಲಸ ಮಾಡಿಯೇ ಇಲ್ಲ. ಇದರಿಂದಾಗಿ ತೆನೆ ಸರಿಯಾಗಿ ಬೆಳೆಯದೆ ಬತ್ತಿಕೊಂಡಿದೆ.

ಆದರೆ ಕೊಯಿಲು ಮುಗಿದ ನಂತರ ಕಾಳಿಗೆ ಬದಲಾಗಿ ತೆನೆಗಳಲ್ಲಿ ಸಣ್ಣ ಸಣ್ಣ ಮುತ್ತುಗಳಿದ್ದವು.



ರೈತನ ಹೆಂಡತಿಗೆ ಖುಶಿಯಾಯಿತು. "ನೋಡಿದಿರಾ? ಗರ್ವದಿಂದ ನೀವು ಹಾಗೆ ಅವಸರದಲ್ಲಿ ನನ್ನ ಅಣ್ಣನನ್ನು ಬಯ್ದದ್ದು ತಪ್ಪು. ನನ್ನ ಅಣ್ಣ ಎಷ್ಟೊಂದು ಶ್ರೀಮಂತ ಬೆಳೆಯನ್ನು ಕೊಟ್ಟಿದ್ದಾನೆ ನೋಡಿ—ಮುತ್ತುಗಳ ಬೆಳೆ!"

ಅವಳ ಗಂಡನಿಗೆ ತುಂಬಾ ಪಶ್ಚಾತ್ತಾಪವಾಯಿತು. "ನಿನ್ನ ಅಣ್ಣ ಒಂದು ಪವಾಡ ಮಾಡಿದ್ದಾನೆ. ಅವನಿಗೆ ದೈವಿಕ ಶಕ್ತಿಗಳಿರಬೇಕು. ಆದರೆ ನಾವು ಈ ಮುತ್ತುಗಳನ್ನು ಇಟ್ಟುಕೊಳ್ಳಬಾರದು. ಸೃಷ್ಟಿಸಿದವನಿಗೇ ಇವು ಸೇರತಕ್ಕದ್ದು. ನಿಜವಾದ ಹಕ್ಕುದಾರನಿಗೆ ಇವುಗಳನ್ನು ನಾವು ಹಿಂದಿರುಗಿಸಬೇಕು."

ಅದಕ್ಕೆ ಹೆಂಡತಿಯೆಂದಳು. "ಅದು ಹೇಗೆ ಸಾಧ್ಯ? ಅವನ ಹೆಸರೇನೆಂದು ಕೂಡಾ ನೀವು ಕೇಳಿ ತಿಳಿದುಕೊಳ್ಳಲಿಲ್ಲ."

ರೈತ ಗಟ್ಟಿ ಮನಸ್ಸಿನಿಂದ ಹೇಳಿದ. "ಈ ಮುತ್ತುಗಳು ನಮಗೆ ಸೇರಿದವುಗಳಲ್ಲ. ಆದ್ದರಿಂದ ನಾವು ಅವುಗಳನ್ನು ಇಟ್ಟುಕೊಳ್ಳಕೂಡದು. ರಾಜನಿಗೆ ಅವುಗಳನ್ನು ನಾನು ಒಪ್ಪಿಸಬೇಕು."

ಅವರಿಬ್ಬರೂ ಮುತ್ತುಗಳನ್ನು ಒಂದು ಗಂಟಿನಲ್ಲಿ ಕಟ್ಟಿ ಅರಮನೆಯ ಕಡೆ ಹೊರಟರು. ಸೀದಾ ರಾಜನ ದರ್ಬಾರಿಗೆ ಬಂದರು. ರಾಜನು ತನ್ನೆರಡು ಪಕ್ಕಗಳಲ್ಲಿಯೂ ಮಂತ್ರಿಗಳನ್ನು, ಗಣ್ಯವ್ಯಕ್ತಿಗಳನ್ನೂ ಕೂರಿಸಿಕೊಂಡು ಸಿಂಹಾಸನದ ಮೇಲೆ ಕೂತಿದ್ದನು. ರೈತ ಮತ್ತು ಅವನ ಹೆಂಡತಿ ಸಿಂಹಾಸನದ ಬಳಿ ಹೋಗಿ ಮುತ್ತಿನ ಗಂಟನ್ನು ಕೈಯಲ್ಲಿ ಹಿಡಿದು ಗೌರವದಿಂದ ತಲೆ ಬಾಗಿದರು.

ಮತ್ತೆ ತಲೆ ಎತ್ತಿ ಇಬ್ಬರೂ ಒಟ್ಟಿಗೆ ಹೇಳಿದರು. "ಪ್ರಭುಗಳೇ, ನಾವು......"

ಅವರು ತಮ್ಮ ಮಾತನ್ನು ಮುಗಿಸುತ್ತಿದ್ದಂತೆ ಅವಕ್ಕಾಗಿ ನಿಂತುಬಿಟ್ಟರು. ಹೆಂಡತಿಯ ಬದಲು ತಾನೇ ಉಳುತ್ತೇನೆಂದು ಮುಂದೆ ಬಂದು ತನ್ನ ಹೊಲವನ್ನು ಉತ್ತಿದ್ದ ಅಪರಿಚಿತ ವ್ಯಕ್ತಿಯೇ ಈ ರಾಜ !

ರೈತ ತೊದಲುತ್ತಾ ಹೇಳಿದ. "ಎಂತಹ ಕೆಲಸ ಮಾಡಿದೆ? ಒಂದು ಸಾಮಾನ್ಯ ಎತ್ತಿನಂತೆ ರಾಜನನ್ನು ನಾನು ದುಡಿಸಿಕೊಂಡೆ ! ಅವರು ಎಂದೂ ನನ್ನನ್ನು ಕ್ಷಮಿಸಲಾರರು !"

ರೈತ ಕೂಡಲೇ ರಾಜನ ಕಾಲುಗಳಿಗೆ ಬಿದ್ದು ಅವನ ಪಾದಗಳನ್ನು ಮತ್ತೆ ಮತ್ತೆ ಹಿಡಿದು ಬೇಡಿಕೊಂಡ. "ಪ್ರಭೂ ತುಂಬಾ ತಪ್ಪಾಯಿತು. ಕ್ಷಮಿಸಬೇಕು."

ರಾಜನಿಗೂ ಈ ರೈತ ದಂಪತಿಗಳ ಗುರುತು ಸಿಕ್ಕಿತು. ಅವನು ಮುಗುಳ್ನಕ್ಕ. "ಎದ್ದೇಳು. ಯಾಕೆ ಕ್ಷಮೆ ಕೇಳುತ್ತೀಯಾ? ನಮ್ಮ ಪ್ರಜೆಗಳ ಸಮಸ್ಯೆಗಳೇನೆಂಬುದನ್ನು ತಿಳಿಯಲು ನೀನು ನಮಗೆ ಅವಕಾಶ ಮಾಡಿಕೊಟ್ಟೆ ಅಷ್ಟೆ. ನಿನಗೂ ಸಹಾಯವಾಯಿತಲ್ಲ, ಅದೇ ನಮಗೆ ಸಂತೋಷ.

ರೈತ ಮುತ್ತಿನ ಗಂಟನ್ನು ರಾಜನ ಪಾದಗಳ ಬಳಿಯಿಟ್ಟು ಹೇಳಿದ. "ನೀವು ಉತ್ತ ಭಾಗದಲ್ಲಿ ಬೆಳೆದ ಮುತ್ತುಗಳು ಇವು. ಅವು ನಮಗೆ ಸೇರುವುದು ನ್ಯಾಯವಲ್ಲ. ನಿಮ್ಮ ದುಡಿಮೆಯ ಫಲ ನಿಮಗೆ ಸಲ್ಲಬೇಕು?

ರಾಜ ಒಪ್ಪಲಿಲ್ಲ. "ನಿಮ್ಮ ಶ್ರಮದ ಮತ್ತು ಎಚ್ಚರದ ಫಲವಾಗಿ ನಿಮ್ಮ ಹೊಲದಲ್ಲಿ ಬೆಳೆದ ಮುತ್ತುಗಳಿವು. ಆದ್ದರಿಂದ ನಿಮಗೇ ಅವು ಸೇರಬೇಕು." ಎಂದು ರಾಜ ಹೇಳಿದ.

ಆವರೆ ರೈತ ಮುತ್ತುಗಳನ್ನು ತೆಗೆದುಕೊಳ್ಳಲು ಈಗಲೂ ಒಪ್ಪಲಿಲ್ಲ. "ಈ ಮುತ್ತುಗಳು ನಿಮ್ಮ ಕರುಣೆ ಮತ್ತು ಪ್ರೀತಿಯ ಫಲವೇ ಹೊರತು ನನ್ನ ಕ್ರೂರತನದ ಫಲವಾಗಲಾರದು. ಆದ್ದರಿಂದ ನಿಮಗೇ ಅವು ಸೇರಬೇಕು" ಎಂದು ಒತ್ತಾಯಪಡಿಸಿದ.

ಆಗ ರಾಜನು ಮುತ್ತಿನ ಗಂಟನ್ನು ಹಿಡಿದುಕೊಂಡು ರೈತನ ಹೆಂಡತಿಯ ಬಳಿ ಹೋದನು. "ನಿನ್ನನ್ನು ನಾನು ತಂಗಿಯೆಂದು ಕರೆದೆ ಅಲ್ಲವೆ? ಆದ್ದರಿಂದ ಸೋದರಿಗೊಂದು ಉಡುಗರೆ ಕೊಡಬೇಕು. ದಯವಿಟ್ಟು ಈ ಸಣ್ಣ ಉಡುಗರೆಯನ್ನು ನನ್ನಿಂದ ನೀನು ತೆಗೆದುಕೊಳ್ಳಬೇಕು" ಎಂದು ರಾಜ ಪ್ರಾರ್ಥಿಸಿದ.

ಈಗ ರೈತನಾಗಲೀ ಅವನ ಹೆಂಡತಿಯಾಗಲೀ ರಾಜ ಕೊಟ್ಟ ಉಡುಗರೆಯನ್ನು ತಿರಸ್ಕರಿಸುವ ಹಾಗಿರಲಿಲ್ಲ. ಹೀಗೆ ಇಬ್ಬರ ನಡುವೆ ಎದ್ದಿದ್ದ ಸಮಸ್ಯೆ ಮುಕ್ತಾಯವಾಯಿತು.



# ದೂರದೃಷ್ಟಿಯ ವರ್ತಕ

ಒಂದಾನೊಂದು ಕಾಲದಲ್ಲಿ ವಾರಣಾಸಿಯಲ್ಲಿ ಮೋಹನ್ ಮತ್ತು ಸೋಹನ್ ಎಂಬ ಇಬ್ಬರು ವರ್ತಕರಿದ್ದರು. ಮೋಹನ್ ಜಾಣ ಹಾಗೂ ಚುರುಕಾದ ಮನುಷ್ಯ. ತನಗೆ ಒದಗಿದ ಸದಾವಕಾಶಗಳನ್ನು ಸರಿಯಾಗಿ ಉಪಯೋಗಿಸಿಕೊಂಡು ಅವನು ತುಂಬ ಹಣವನ್ನು ಗಳಿಸಿದ್ದ. ಆದರೆ ಸೋಹನ್ ದಡ್ಡ. ತಾನು ಜಾಣನೆಂದು ಅವನು ತಿಳಿದುಕೊಂಡಿದ್ದರೂ ಅವನು ನಿಜವಾಗಿ ಪೆದ್ದನಾಗಿದ್ದ.

ಒಂದು ದಿನ ಮೋಹನ್ ವ್ಯಾಪಾರ ಮಾಡಲು ಹೋಗಬೇಕೆಂದು ನಿರ್ಧರಿಸಿದ. ಬಗೆ ಬಗೆಯ ಬೆಲೆಯುಳ್ಳ ಸರಕುಗಳನ್ನು ಕೊಂಡು ಐನೂರು ಎತ್ತಿನ ಗಾಡಿಗಳಲ್ಲಿ ತುಂಬಿದ. ಈ ಸುದ್ದಿ ತಿಳಿದೊಡನೆಯೇ ಸೋಹನ್ "ನಾನು ಕೂಡ ಬೇರೆ ಪಟ್ಟಣಗಳಲ್ಲಿ ಹೋಗಿ ವ್ಯಾಪಾರ ಮಾಡುತ್ತೇನೆ. ಮೋಹನನನ್ನು ಸೋಲಿಸುತ್ತೇನೆ." ಎಂದು ಯೋಚಿಸಿದ.

ಸೋಹನನ ಹತ್ತಿರ ದುಡ್ಡಿಲ್ಲದಿದ್ದರೂ ಮೋಹನ್ ಕೊಂಡ ಸರಕುಗಳನ್ನೆಲ್ಲ ತಾನೂ ಸಾಲ ಮಾಡಿಕೊಂಡು ಬಾಡಿಗೆಗೆ ತಂದ ಐನೂರು ಎತ್ತಿನ ಗಾಡಿಗಳಲ್ಲಿ ಅವುಗಳನ್ನು ತುಂಬಿದ.

ಸೋಹನನ ಈ ತಯಾರಿಗಳನ್ನು ತಿಳಿದ ಮೋಹನನಿಗೆ ಯೋಚನೆಗಿಟ್ಟುಕೊಂಡಿತು. ಸೋಹನ್ ಹತ್ತಿರ ಹೋಗಿ ಹೇಳಿದ. "ನಾವಿಬ್ಬರೂ ಒಂದೇ ದಾರಿಯಲ್ಲಿ ಹೋಗುವುದಾದರೆ, ಬೇರೆ ಬೇರೆಯಾಗಿ ಹೋಗುವದೇ ಉತ್ತಮ. ರಸ್ತೆ ಸಾವಿರ ಗಾಡಿಗಳ ಭಾರ ತಾಳುವಷ್ಟು ಒಳ್ಳೆಯ ಸ್ಥಿತಿಯಲ್ಲಿಲ್ಲ. ಅಲ್ಲದೆ ರೈತರು ನಮಗೆ ಆಹಾರ ಮತ್ತು ವಸತಿಗಳನ್ನು ಒದಗಿಸಬೇಕಾದ್ದರಿಂದ ಅವರಿಗೂ ತೊಂದರೆಯಾಗುತ್ತದೆ. ಆದ್ದರಿಂದ ನೀನೇ ನಿರ್ಧರಿಸು—ನಿನಗೆ ಮೊದಲು ಹೋಗುವುದು ಇಷ್ಟವೋ ಅಥವಾ ನನ್ನ ನಂತರ ಬರುತ್ತಿಯಾ?"

ಸೋಹನ್‌ಗೆ ತುಂಬಾ ಖುಷಿಯಾಯಿತು—ತನ್ನಷ್ಟಕ್ಕೆ ಅಂದುಕೊಂಡ: "ನಾನೇ ಮೊದಲು ಹೋಗುತ್ತೇನೆ. ರಸ್ತೆ ಮಟ್ಟವಾಗಿರುತ್ತದೆ, ಎತ್ತುಗಳಿಗೆ ಹಸನಾದ ಹುಲ್ಲು ಸಿಗುತ್ತದೆ. ನನ್ನ ಆಳುಗಳಿಗೆ ಅತ್ಯುತ್ತಮ ಆಹಾರ ಮತ್ತು ಅತಿಥಿ ಸತ್ಕಾರ ಸಿಗುತ್ತದೆ. ಅಲ್ಲದೆ ಪಟ್ಟಣಗಳನ್ನು ತಲುಪಿದಾಗ ನಾನೇ ಮೊದಲಿನವನಾದ್ದರಿಂದ ನನ್ನ ಸರಕುಗಳನ್ನು ಮಾರುವುದು ಸುಲಭವಾಗುತ್ತದೆ."

ಮೋಹನನಿಗೂ ಹೀಗೆಯೇ ಅನ್ನಿಸಿತ್ತು. ಆದರೆ ವಿಷಯವನ್ನೆಲ್ಲ ಮನಸ್ಸಿನಲ್ಲೆ ತಿರುವಿಹಾಕಿ



ಬೇರೆ ತೀರ್ಮಾನಕ್ಕೆ ಬಂದ. ಆದ್ದರಿಂದ ತಾನು ಮೊದಲು ಪ್ರಯಾಣಮಾಡುತ್ತೇನೆಂದು ಸೋಹನ್ ಆಸೆ ವ್ಯಕ್ತಪಡಿಸಿದಾಗ. ಮೋಹನ್ ಅನುಮಾನಿಸದೆ ಒಪ್ಪಿಕೊಂಡು ಬಿಟ್ಟ.

ಐದುನೂರು ಬಂಡಿಗಳ ಸೋಹನ್‌ನಿನ ವ್ಯಾಪಾರಯಾತ್ರೆ ಮೊದಲು ಹೊರಟಿತು. ಸೋಹನ್ ಖುಷಿಯಿಂದ ಹಾಡಿದ; ತಾನು ಸಂಪಾದಿಸಲಿದ್ದ ಶ್ರೀಮಂತಿಕೆಯ ಬಗ್ಗೆ ಹಗಲುಗನಸುಗಳನ್ನು ಕಂಡ. ಆದರೆ ಅವನ ಕನಸು ಬಹುಬೇಗನೆ ಭಂಗವಾಯಿತು. ರಸ್ತೆ ಕಲ್ಲು ಹಳ್ಳಗಳಿಂದ ಕೂಡಿ ಬಂಡಿಗಳು ಹೋಗುವಂತಿರಲಿಲ್ಲ. ರಸ್ತೆಯನ್ನು ರಿಪೇರಿಮಾಡಲು ಹಳ್ಳಿಯ ಜನ ಸಹಾಯ



ಮಾಡಿದರು. ಆದರೆ ಇದಕ್ಕಾಗಿ ಅವರಿಗೆ ಊಟ, ಹಣ ಕೊಡಬೇಕಾಯಿತು. ಹೀಗೆ ವಿಪರೀತ ಖರ್ಚಾಗಿದ್ದಲ್ಲದೆ, ಕಾಲಹರಣವೂ ಆಯಿತು.

ಸೋಹನನ ಬಂಡಿಗಳು ಹೀಗೆ ರಿಪೇರಿಯಾದ ರಸ್ತೆಯ ಮೇಲೆ ಚಲಿಸಿದುವು. ಸ್ವಲ್ಪ ಸಮಯದಲ್ಲೆ ಅವರು ದಟ್ಟವಾದ ಕಾಡೊಂದನ್ನು ಹೊಕ್ಕರು. ಸೋಹನ್ ಕಡೆ ಜನರು ಮರ ಗಳನ್ನು ಕಡಿದು ಬಂಡಿಗಳಿಗೆ ದಾರಿಮಾಡಬೇಕಾಯಿತು. ಕಾಡಿನ ತುಂಬ ದುಷ್ಟ ಪ್ರಾಣಿಗಳಿದ್ದುವು- ಹುಲಿ, ಸಿಂಹ, ಚಿರತೆ ಇತ್ಯಾದಿ. ದಿನದ ದುಡಿಮೆಯಿಂದ ಬಳಲಿ ಕತ್ತಲಾದ ಮೇಲೆ ಎಲ್ಲರೂ ನಿದ್ದೆಮಾಡಿದ ಕೂಡಲೇ, ದುಷ್ಟ ಪ್ರಾಣಿಗಳು ಬಂದು ಎತ್ತುಗಳನ್ನು ಕೊಂದು ತಿಂದುಬಿಡು ತ್ತಿದ್ದುವು.

ಸೋಹನ್ ಮತ್ತು ಅವನ ಕಡೆ ಜನರು ಬಳಲಿ ನಿಸ್ತೇಜಿತರಾದರು. ಮುಂದೆ ಹೋಗೋ ಣವೆ, ಅಥವಾ ಹಿಂದಕ್ಕೆ ಮನೆಗಳಿಗೆ ತೆರಳುವುದೇ ಎಂದು ಅವರು ಚರ್ಚಿಸುತ್ತಿದ್ದಾಗ ತಮ್ಮ ಎದಿರು ರಸ್ತೆಯಿಂದ ಒಂದು ಗಾಡಿ ಬರುವುದನ್ನು ಸೋಹನ್ ಕಂಡ, ಬಿಳಿಯ ಎತ್ತುಗಳು ಎಳೆಯುತ್ತಿದ್ದ ಆ ಗಾಡಿ ದೊಡ್ಡದಾಗಿತ್ತು; ಸುಮಾರು ಆರು ಜನ ಅದರಲ್ಲಿದ್ದರು. ಅವರ ಬಟ್ಟೆ ಗಳು ಒದ್ದೆಯಾಗಿ ನೀರು ತೊಟ್ಟಿಕ್ಕುತ್ತಿತ್ತು. ಕತ್ತಿನ ಸುತ್ತ ಅವರು ಕಮಲದ ಹೂಗಳ ಹಾರ ವನ್ನು ಹಾಕಿಕೊಂಡಿದ್ದರು.

ಸೋಹನ್ ಅವರನ್ನು ವಂದಿಸಿ ವಿನಯದಿಂದ ಕೇಳಿದ: "ನೀವು ಪ್ರಯಾಣ ಮಾಡಿದ ದಾರಿ ಹೇಗಿದೆ? ಸಾಕಷ್ಟು ನೀರು ಊಟ ಸಿಗುವುದೆ?"

"ಓಹೋ, ಇದೆ", ಒಕ್ಕೊರಲಿನಿಂದ ಅವರು ಉತ್ತರ ಕೊಟ್ಟರು, "ನಮ್ಮ ಬಟ್ಟೆಗಳು ಎಷ್ಟು ಒದ್ದೆಯಾಗಿವೆ ನೋಡಿ. ಗಾಡಿಯ ಚಕ್ರಗಳು ಎಷ್ಟು ಕೆಸರಾಗಿವೆ ನೋಡಿ, ಅಲ್ಲಿ ಚೆನ್ನಾಗಿ ಮಳೆ ಯಾಗಿದೆ. ಹೊಲಗದ್ದೆಗಳು ಪೈರಿನಿಂದ ತುಂಬಿ ನಿಂತು ಕಣ್ಣಿಗೆ ಹಬ್ಬದಂತಿವೆ".

ಸೋಹನ್ ತನ್ನ ಬಂಡಿಗಳಲ್ಲಿ ತುಂಬಿಟ್ಟುಕೊಂಡಿದ್ದ ನೀರಿನ ಮಡಕೆಗಳನ್ನು ನೋಡಿ ಅವರು ಗಹಗಹಿಸಿ ನಕ್ಕರು: "ಇಷ್ಟೊಂದು ನೀರನ್ನು ಯಾಕೆ ಹೊತ್ತುಕೊಂಡು ಹೋಗುತ್ತಿದ್ದೀರಿ? ಎತ್ತುಗಳಿಗೆ ಸುಮ್ಮನೇ ಭಾರ—ಅಷ್ಟೇ. ಇವೆಲ್ಲ ಅನಾವಶ್ಯಕ. ನಿಮ್ಮ ಹತ್ತಿರವಿರುವ ಮೇವು ಆಹಾರ, ನೀರನ್ನು ಚೆಲ್ಲಿಬಿಟ್ಟು ಹಗುರವಾಗಿ ಹೋಗಿ" ಎಂದರು.

ಅವರ ಮಾತನ್ನು ನಂಬಿ ಆಹಾರ ಮೇವು ನೀರನ್ನು ಚೆಲ್ಲಿದ್ದಾಯಿತು. ಹಗುರವಾದರಿಂದ ಎತ್ತುಗಳು ಖುಶಿಯಾಗಿ ಬಂಡಿಗಳನ್ನು ಎಳೆದವು. ಸೋಹನ್ ಕುತೂಹಲದಿಂದ ಹಸಿರಾಗಿ

ಫಲವತ್ತಾದ ಭೂಮಿಯನ್ನು ಕಾಣುವ ಆತುರದಿಂದ ಕಾದು ಕುಳಿತನು ಆದರೆ ಮುಂದೆ ಹೋದಂತೆಲ್ಲ ಹೆಚ್ಚು ಹೆಚ್ಚು ಬರಡು ಬಂಜರು ಭೂಮಿಗಳೇ ಕಂಡವು. ಕೊನೆಗೆ ಅವರು ಒಂದು ಮರುಭೂಮಿಯನ್ನು ಹೊಕ್ಕರು.

ಹಸಿವು ಮತ್ತು ಬಾಯಾರಿಕೆಗಳಿಂದ ಅನೇಕ ಜನರೂ, ಎತ್ತುಗಳೂ ಸತ್ತವು. ಉಳಿದವರು ನಿಶ್ಯಕ್ತರಾಗಿ ಕಾಲೆಳೆಯುತ್ತಾ ನಡೆದರು. ಆಗ ಅವರು ಹಿಂದೆ ಸಂದಿಸಿದ್ದ ಅಪರಿಚಿತರು (ಅವರು ದರೋಡೆಕೋರರು !) ಇವರನ್ನು ಮುತ್ತಿದರು. ಉಳಿದಿದ್ದ ಎತ್ತುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಕೈಗೆ ಸಿಕ್ಕ ಜನರನ್ನೆಲ್ಲ ಕೊಂದರು. ಸೋಹನ್ ಮತ್ತು ಅವನ ಕೆಲವು ಗೆಳೆಯರು ಹೇಗೋ ತಮ್ಮ ಜೀವವನ್ನು ಉಳಿಸಿಕೊಂಡು ಓಡಿಬಿಟ್ಟರು.

ಬಳಲಿ ಬೆಂಡಾಗಿದ್ದ ಸೋಹನ್ ಮತ್ತು ಅವನ ಗೆಳೆಯರು ಪಟ್ಟಣವನ್ನು ಕೊನೆಗೆ ತಲುಪಿ ತಾವು ಹೇಗೋ ಉಳಿಸಿತಂದಿದ್ದ ಸರಕುಗಳನ್ನು ಮಾರಿದರು. ಆ ಊರಿನಲ್ಲಿ ಪದಾರ್ಥಗಳ ಧಾರಣೆ ಏನೆಂದು ಅವರಿಗೆ ಗೊತ್ತಿರಲಿಲ್ಲ—ಅಲ್ಲದೆ ಅವರು ಕಷ್ಟ ಪರಿಸ್ಥಿತಿಯಲ್ಲಿ ಇದ್ದುದನ್ನು ಕಂಡ ವರ್ತಕರು ಅವರಿಂದ ಬಹಳ ಕಡಿಮೆ ಬೆಲೆಗೆ ಸರಕುಗಳನ್ನು ಕೊಂಡುಕೊಂಡರು.

ಹೀಗೆ ಕಷ್ಟ ನಷ್ಟಗಳಿಗೆ ಒಳಗಾದ ಸೋಹನ್ ನಿರಾಶೆಯಿಂದ ಊರಿಗೆ ಹಿಂದಿರುಗಿದ.

ಅನಂತರ ಮೋಹನ್ ತನ್ನ ಸರಕುಗಳ ಜೊತೆ ಹೊರಟ. ಸೋಹನ್ ಮತ್ತು ಅವನ ಕಡೆಯ ಜನರು ಪಟ್ಟ ಶ್ರಮದಿಂದಾಗಿ ದಾರಿ ಅವನಿಗೆ ಸುಗಮವಾಗಿತ್ತು. ಕಾಡಿನ ಮೂಲಕ ಹೋಗಲು ಅವರು ಮಾಡಿದ ರಸ್ತೆಯಿತ್ತು—ಅಲ್ಲದೆ ದುಷ್ಟ ಮೃಗಗಳು ಹೆದರಿ ಓಡಿಹೋಗಿದ್ದವು.

ಅವರು ಕೂಡ ದರೋಡೆಕಾರರನ್ನು ದಾರಿಯಲ್ಲಿ ಬೆಟ್ಟಿಯಾದರು. ಮುಂದೆ ಸಿಗುವ ಊರು ಸಮೃದ್ಧಿಯಿಂದ ಕೂಡಿದೆ, ಆಹಾರ ನೀರುಗಳನ್ನು ಎಸೆದು ಬಿಡಿ ಎಂದು ಮೋಹನ್‌ನ ಕಡೆಯವರಿಗೂ ಅವರು ಒತ್ತಾಯ ಪಡಿಸಿದರು. ಆದರೆ ಮೋಹನ್ ಜಾಣ. ತನ್ನ ಕಡೆಯವರಿಗೆ ಅವನು ಹೇಳಿದ, "ಇವರ ಮಾತಿನಲ್ಲಿ ನನಗೆ ನಂಬಿಕೆಯಿಲ್ಲ. ಮುಂದಿರುವ ಭೂಮಿ ನನಗೆ ಒಣಗಿರುವಂತೆ ಕಾಣಿಸುತ್ತದೆ. ಈ ಜನರು ಕಮಲದ ಹೂಗಳ ಹಾರವನ್ನು ಹಾಕಿಕೊಂಡು ಒದ್ದೆ ಬಟ್ಟೆಗಳನ್ನು ಧರಿಸಿದ್ದಾರೆ—ನಿಜ, ಆದರೆ ಆಕಾಶ ಮಾತ್ರ ಮೋಡಗಳಿಲ್ಲದೆಯೇ ಶುಭ್ರವಾಗಿದೆ. ಯಾವುದೋ ಕಾರಣಕ್ಕಾಗಿ ಈ ಜನ ನಮ್ಮನ್ನು ಮೋಸಗೊಳಿಸಲು ಪ್ರಯತ್ನಿಸುತ್ತಿದ್ದಾರೆಂದು ನನಗೆ ಅನ್ನಿಸುತ್ತದೆ."

ಮೋಹನ್ ದರೋಡೆಕಾರರ ಮಾತನ್ನು ಕೇಳಿಸಿಕೊಳ್ಳಲಿಲ್ಲ. ಆದ್ದರಿಂದ ಅವನ ಪರಿವಾರ ಮರಳುಗಾಡನ್ನು ಸೇರಿದಾಗ ಅವರ ಹತ್ತಿರ ಯಥೇಚ್ಛವಾಗಿ ಆಹಾರ ಮತ್ತು ನೀರು ಉಳಿದಿತ್ತು. ಆದ್ದರಿಂದ ಅವರು ಸುಖವಾಗಿ ಪ್ರಯಾಣಮಾಡಿದರು.

ಪಟ್ಟಣಗಳನ್ನು ಸೇರಿಯಾದ ಮೇಲೆ ಮಾರುಕಟ್ಟೆಯ ಧಾರಣೆಗಳನ್ನು ಮೋಹನ್ ಸರಿಯಾಗಿ ವಿಚಾರಿಸಿ ತಿಳಿದುಕೊಂಡನು. ಸಾಕಷ್ಟು ಲಾಭ ಬರುವಂತೆ ತನ್ನ ಸರಕುಗಳನ್ನು ಮಾರಿ, ತೃಪ್ತನೂ, ಸಂತೋಷಿಯೂ ಆಗಿ ಊರಿಗೆ ಹಿಂದಿರುಗಿದನು.



# ಪ್ರಸಾದ

ದಕ್ಷಿಣ ಭಾರತದ ಒಂದಾನೊಂದು ಹಳ್ಳಿಯಲ್ಲಿ ಒಬ್ಬ ಬಡ ರೈತನು ವಾಸಿಸುತ್ತಿದ್ದನು. ಆತನಿಗೆ ಉಮ ಎಂಬ ಎಂಟು ವರ್ಷದ ಮಗಳೂ, ಗೋಪಾಲ್ ಎಂಬ ಚಿಕ್ಕ ಮಗುವೂ ಇದ್ದರು. ರೈತನ ಹೆಂಡತಿ ಸತ್ತ ಮೇಲೆ, ಉಮ ತನ್ನ ಚಿಕ್ಕ ತಮ್ಮನನ್ನು ಸಾಕುವ ಜವಾಬ್ದಾರಿಯನ್ನು ಹೊರ ಬೇಕಾಯಿತು. ಸ್ವಲ್ಪ ವರ್ಷಗಳ ನಂತರ ರೈತನೂ ಸತ್ತ. ಹೀಗಾಗಿ ಇಬ್ಬರು ಮಕ್ಕಳೂ ಪರದೇಶಿ ಗಳಾದರು.

ಚಿಕ್ಕವಳಿದ್ದರೂ ಉಮ ತುಂಬ ತಿಳುವಳಿಕೆಯುಳ್ಳ ಹುಡುಗಿ. ಗೋಪಾಲನಿಗೆ ತಾನೇ ತಂದೆ ತಾಯಿ ಎರಡೂ ಆಗಬೇಕೆಂದು ಅವಳಿಗೆ ಗೊತ್ತು. ಜೀವನ ಬೇರೆ ಸಾಗಬೇಕು. ಅವಳೇ ಹೊಲ ಉಳಬೇಕು, ನೀರು ಗೊಬ್ಬರಗಳನ್ನು ಒದಗಿಸಿಕೊಳ್ಳಬೇಕು, ಬಿತ್ತಬೇಕು, ಕೊನೆಗೆ ಕೊಯ್ಲನ್ನೂ ಮಾಡಬೇಕು, ನೆರೆಹೊರೆಯವರು ಅವಳ ಧೈರ್ಯವನ್ನು ಮೆಚ್ಚಿದರು. ಅವಳಿಗೆ ಸಹಾಯ ಮಾಡಿದರು. ಒಳ್ಳೆಯ ಫಸಲು ಅವಳ ಕೈಗೆ ದಕ್ಕಿತು. ಹೀಗೆ ಅಕ್ಕ ತಮ್ಮಂದಿರು ಬದುಕಿದರು.

ವರ್ಷಗಳು ಕಳೆದುವು. ಗೋಪಾಲ ತನ್ನ ವಿದ್ಯಾಭ್ಯಾಸ ಮುಗಿಸಿದ. ಒಂದುದಿನ ಅವನು ಅಕ್ಕನಿಗೆ ಹೇಳಿದ, "ನನ್ನನ್ನು ಬೆಳೆಸಲೆಂದು ನೀನು ನಿನ್ನ ಜೀವನದ ಉತ್ತಮ ಭಾಗವನ್ನೆಲ್ಲ ಸವೆಸಿದ್ದೀಯ. ಇಲ್ಲದಿದ್ದರೆ ಈಗಾಗಲೇ ನಿನಗೆ ಮದುವೆಯಾಗಿ, ನಿನಗೊಂದು ಸಂಸಾರವಿರ ಬೇಕಿತ್ತು. ಹುಡುಗಿಯೊಬ್ಬಳಿಗೆ ಮದುವೆ ಮಾಡಲು ತುಂಬ ಹಣಬೇಕು. ಆದರೆ ನನ್ನ ಹತ್ತಿರ ದುಡ್ಡಿಲ್ಲ. ವರದಕ್ಷಿಣೆ ತೆತ್ತು ನಿನಗೆ ನಾನು ಮದುವೆ ಮಾಡಲಾರೆ."

ಆದರೆ ಉಮ ಏನನ್ನೂ ತಲೆಗೆ ಹಚ್ಚಿಕೊಳ್ಳಲಿಲ್ಲ. ಒಂದು ದಿನ ಉಮನನ್ನು ಮೊದಲಿನಿಂದಲೂ ಪ್ರೀತಿಸುತ್ತಿದ್ದ ಹಳ್ಳಿಯ ಒಬ್ಬ ಯುವಕ ರೈತ ಗೋಪಾಲನನ್ನು ನೋಡಲು ಬಂದ. ಉಮಳನ್ನು ತನಗೆ ಕೊಟ್ಟು ಮದುವೆಮಾಡಬೇಕೆಂದು ಗೋಪಾಲನನ್ನು ಪದ್ಧತಿಗೆ ತಕ್ಕಂತೆ ಕೇಳಿದ. ತನಗೆ ವರದಕ್ಷಿಣೆ ಬೇಡವೆಂದೂ, ಉಮಳ ಸ್ವಾರ್ಥತ್ಯಾಗ ಮತ್ತು ಎದೆಗುಂದದ ಧೈರ್ಯಕ್ಕಾಗಿ ಅವಳನ್ನು ತಾನು ಪ್ರೀತಿಸುತ್ತೇನೆ ಎಂದೂ ಹೇಳಿದ.

ಮದುವೆಯ ದಿನ ನಿಶ್ಚಯವಾಯಿತು. ಮದುವೆಯೂ ಆಯಿತು. ಗಂಡನ ಮನೆಗೆ ಹೊರಡುವುದಕ್ಕಿಂತ ಮುಂಚೆ ಉಮ ತನ್ನ ತಮ್ಮನಿಗೆ ಹೇಳಿದಳು: "ಇನ್ನೇನು ನಿನಗೂ ಮದುವೆಯಾಗುತ್ತದೆ. ಪದ್ಧತಿಯಂತೆ ಶ್ರಾವಣಮಾಸದ ಮೊದಲನೆಯ ಶುಕ್ರವಾರ ಈ ಮನೆಯಲ್ಲಿ ನಡೆಯುತ್ತ ಬಂದಿರುವ ಲಕ್ಷ್ಮೀಪೂಜೆಯನ್ನು ನೀನು ಮುಂದುವರಿಸಬೇಕು. ಈ ಸಂಪ್ರದಾಯವನ್ನು ನೀನೂ, ನಿನ್ನ ಹೆಂಡತಿಯೂ ಮುಂದುವರಿಸಿಕೊಂಡು ಹೋಗುತ್ತೀರೆಂದು ವಚನ ಕೊಡು" ಅಕ್ಕನ ಈ ಸಣ್ಣ ಕೋರಿಕೆಯನ್ನು ಖಂಡಿತಾ ನಡೆಸಿಕೊಡುತ್ತೇನೆಂದು ಗೋಪಾಲ ಅನುಮಾನಿಸದೆ ವಚನಕೊಟ್ಟ.

ವರ್ಷಗಳು ಕಳೆದವು. ಗೋಪಾಲ ಕಷ್ಟಪಟ್ಟು ದುಡಿದ. ಅವನಿಗೆ ಒಳ್ಳೆಯ ಫಸಲು ದಕ್ಕಿತು. ಅವನು ಕಮಲೆ ಎನ್ನುವ ಶ್ರೀಮಂತ ರೈತನೊಬ್ಬನ ಮಗಳನ್ನು ಮದುವೆಯಾದನು. ಕಮಲೆ ಸುಂದರಿ—ಆದರೆ ಅತಿ ಮುದ್ದಿನಿಂದಾಗಿ ಕೆಟ್ಟುಹೋಗಿದ್ದಳು.

ಕೆಲವು ವಾರಗಳೊಳಗೆ ಶ್ರಾವಣಮಾಸ ಬಂದಿತು. ಇಡೀ ಹಳ್ಳಿಗೆ ಹಳ್ಳಿಯೇ ಲಕ್ಷ್ಮೀಪೂಜೆಯ ಸಿದ್ಧತೆಯಲ್ಲಿ ತೊಡಗಿತ್ತು. ಮುಖ್ಯವಾಗಿ ಹೊಸದಾಗಿ ಮದುವೆಯಾದ ಹೆಣ್ಣುಗಳಿದ್ದ ಮನೆಗಳಲ್ಲಂತೂ ಭಾರಿ ಸಂಭ್ರಮ. ಮದುವೆಯಾದ ಹೆಣ್ಣುಮಕ್ಕಳಿಗೆ, ತಂಗಿಯರಿಗೆ ವಿಶೇಷವಾದ ಮರ್ಯಾದೆ ಸಿಗುವ ಹಬ್ಬವಿದು. ಈ ಸುಮಂಗಲೆಯರು ಪ್ರತಿಮನೆಯಲ್ಲೂ ಅತಿಥಿಗಳಂತೆ ಈ ಸಂದರ್ಭದಲ್ಲಿ ಸತ್ಕಾರ ಪಡೆಯುತ್ತಾರೆ. ಹುಡುಗಿ ಹರಸಿದ ಮನೆ ಸಮೃದ್ಧವಾಗುತ್ತದೆಂದೂ, ಶಪಿಸಿದರೆ ಕೇಡಿಗೊಳಗಾಗುತ್ತದೆಂದೂ ಜನರ ನಂಬಿಕೆ. ಗೋಪಾಲನು ತಾನು ಕೊಟ್ಟ ವಚನವನ್ನು ನೆನೆಸಿಕೊಂಡು ತನ್ನ ಹೆಂಡತಿಗೆ ಹೇಳಿದ. ಕಮಲೆ ಲಕ್ಷ್ಮೀಪೂಜೆಯನ್ನು ಸಡಗರದಿಂದ ನಡೆಸಲು ಮುಂದಾದಳು. ಆದರೆ ಒಂದು ಶರತ್ತನ್ನು ಹಾಕಿ. ಗಂಡನ ಹತ್ತಿರ ಹೀಗೆ ಬೇಡಿಕೊಂಡಳು. "ಈ ಹಬ್ಬಕ್ಕೆ ನಿನ್ನ ಅಕ್ಕನನ್ನು ನೀನು ಕರೆಯಕೂಡದು. ಅವಳು ಬಡವಿ. ಚಿಂದಿ ಬಟ್ಟೆಯುಟ್ಟು ಬರುತ್ತಾಳೆ. ಅವಳ ಮಕ್ಕಳು ಮರಿಗಳು ಕೊಳಕಾಗಿ ಕಾಣುತ್ತಾರೆ. ಬಡವರಾದ ಸಂಬಂಧಿಗಳು ನಮಗಿದ್ದಾರೆಂದು ತಿಳಿದರೆ ನನ್ನ ಕಡೆಯವರು ಹಾಸ್ಯಮಾಡುತ್ತಾರೆ. ನಮಗೆ ಅದರಿಂದ ಅವಮಾನವಾಗುತ್ತದೆ."

ಗೋಪಾಲ ಒಪ್ಪಿದ. ಉಮಳನ್ನು ಅವನು ಕರೆಯಲಿಲ್ಲ. ತನ್ನ ಶ್ರೀಮಂತಳೂ, ಸುಂದರಿಯೂ ಆದ ಹೆಂಡತಿಗೆ ನೋವುಂಟುಮಾಡಲು ಅವನಿಗೆ ಇಷ್ಟವಿರಲಿಲ್ಲ.

ಆವತ್ತೂ ಶ್ರಾವಣದ ಮೊದಲನೆಯ ಶುಕ್ರವಾರ. ಗೋಪಾಲನ ಮನೆಯ ತುಂಬ ಜನರು ಸೇರಿದ್ದರು. ಹೂವು, ದೂಪ, ಧೂಮ, ಬೆರೆತ ಸುವಾಸನೆ ಮನೆಯನ್ನು ಆವರಿಸಿತ್ತು. ಅಡಿಗೆ ಮನೆಯಿಂದ ಭಕ್ಷಭೋಜ್ಯಗಳ ಘಮಘಮ ವಾಸನೆ. ವಿಧವಿಧವಾದ ಭಕ್ಷಗಳನ್ನು ತಯಾರಿಸ ಲೆಂದು ಅಡಿಗೆಯವರನ್ನು ಕರೆಸಲಾಗಿತ್ತು. ಬಂದ ಅತಿಥಿಗಳಿಗೆಲ್ಲ ಹೂವಿನ ಹಾರಗಳನ್ನು ಹಾಕಿ ಪನ್ನೀರು ಚಿಮುಕಿಸಿ ಫಲತಾಂಬೂಲಗಳನ್ನು ಕೊಟ್ಟು ಸತ್ಕಾರ ನಡೆಯಿತು.

ಹಬ್ಬದ ಈ ಸಂಭ್ರಮ, ಸಡಗರಗಳ ನಡುವೆ ಉಮೆ ಇದ್ದಕ್ಕಿದ್ದಂತೆ ಬಂದಳು. ಕಮಲೆಯ ಸುಂದರವಾದ ಮುಖ ಬಾಡಿ ಬಿಳಿಚಿಕೊಂಡಿತು. ದೊಡ್ಡದೊಂದು ಬೆಳ್ಳಿಯ ಬಟ್ಟಲಿನಲ್ಲಿ ಕಮಲೆ ಪ್ರಸಾದವನ್ನು ಇಟ್ಟುಕೊಂಡು ಹಂಚುತ್ತಿದ್ದಳು. ಅತಿಥಿಗಳಿಗೆ ಹೀಗೆ ಪ್ರಸಾದವನ್ನು ಹಂಚುತ್ತಿದ್ದ ಕಮಲೆಯನ್ನು ಉಮೆ ಅಪ್ಪಿಕೊಂಡಳು. ತಾನೇ ಪ್ರಸಾದವನ್ನು ತೆಗೆದುಕೊಂಡು ಕಮಲೆಗೆ ಹೇಳಿದಳು. "ನೋಡಲು ಎಷ್ಟು ಚೆನ್ನಾಗಿ ಕಾಣುತ್ತಿದ್ದಿ, ಕಮಲ ನನ್ನ ತಮ್ಮನೆಲ್ಲಿ? ನನ್ನ ಕೊಟ್ಟ ವಚನವನ್ನು ಅವನು ಮುರಿದಿಲ್ಲವಲ್ಲ—ಆದ್ದರಿಂದ ತುಂಬಾ ಸಂತೋಷ. ನಿಮಗೆ ತುಂಬಾ ಕೆಲಸವಿದ್ದುದರಿಂದ ನೀವು ನನ್ನನ್ನು ಕರೆಯಲು ಮರೆತಿರಬಹುದು. ಆದರೆ ಪರವಾಗಿಲ್ಲ. ನನ್ನ ತಮ್ಮನ ಮನೆಗೆ ಬರಲು ನನಗೇನೂ ಆಮಂತ್ರಣ ಬೇಕಾಗಿಲ್ಲ. ಈ ಮನೆಗೆ ನಾನೇನು ಅತಿಥಿಯಲ್ಲ?"

ರೂಮಿನಲ್ಲಿ ಸೇರಿದವರ ಮೌನವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಉಮ ಸಂತೋಷದಿಂದ ಮಾತಾಡಿದಳು. ಕಮಲೆಯ ಶ್ರೀಮಂತ ಸ್ನೇಹಿತರು ಮೂಗು ಮುರಿದರು. ಕಮಲೆ ಅವ ಮಾನಿತಳಾದಳು. ಗೋಪಾಲ ತಲೆ ತಗ್ಗಿಸಿದ.

ಎಳು ವರ್ಷಗಳು ಹೀಗೆಯೇ ಕಳೆದವು. ಪ್ರತಿ ವರ್ಷವೂ ಕಮಲೆ ವೈಭವದಿಂದ ಲಕ್ಷ್ಮಿ ಪೂಜೆಯನ್ನು ಆಚರಿಸುತ್ತಿದ್ದಳು. ನೂರಾರು ಅತಿಥಿಗಳು ಬಂದು ಹೊಟ್ಟೆ ತುಂಬ ಊಟಮಾಡಿ ಹೋಗುತ್ತಿದ್ದರು. ಉಮೆ ಮಾತ್ರ ಪ್ರತಿ ವರ್ಷವೂ ಕರೆಯದಿದ್ದರೂ. ಬಂದು ಹೋಗುತ್ತಿದ್ದಳು. ತನ್ನ ತೇಪೆಹಾಕಿದ ಸೀರೆಯಲ್ಲಿಯೇ ಬಂದು ಬಾಳೆಯೆಲೆಯ ಮೇಲೆ ಒಂದಿಷ್ಟು ಪ್ರಸಾದವನ್ನು ಪಡೆದು ಖುಷಿಯಿಂದ ಗೋಪಾಲ ಮತ್ತು ಕಮಲೆಯನ್ನು ಆಶೀರ್ವದಿಸಿ ಹೊರಟು ಹೋಗು ತ್ತಿದ್ದಳು. ಗೋಪಾಲ ಮತ್ತು ಕಮಲೆಯರಿಗೆ ಇದರಿಂದ ಪ್ರತಿ ವರ್ಷವೂ ಮುಜುಗರವಾಗು ತ್ತಿತ್ತು.

ಈ ಎಲ್ಲ ವರ್ಷಗಳಲ್ಲೂ ಉಮೆಯ ಗಂಡ ಸಂಸಾರವನ್ನು ನಿರ್ವಹಿಸಲು ತುಂಬ ಕಷ್ಟಪಟ್ಟು



ಮಂಡಿದ. ಉಮೆಗೆ ಮಾತ್ರ ಇದ್ದಷ್ಟರಲ್ಲೇ ತೃಪ್ತಿ. ಕ್ರಮೇಣ ಅವಳ ಗಂಡನ ವ್ಯಾಪಾರ ಕುದುರಿತು. ನಿಧಾನವಾಗಿ ಹಣ ಶೇಖರಣೆಯಾಗಿ ಅವರು ತುಂಬ ಶ್ರೀಮಂತರಾದರು. ಈಗ ಉಮೆ ದೊಡ್ಡ ಮನೆಯಲ್ಲಿ ವಾಸಿಸುತ್ತ ಅತ್ಯುತ್ತಮ ರೇಷ್ಮೆಬಟ್ಟೆಗಳನ್ನು ಉಟ್ಟುಕೊಂಡಳು. ಕೆಲಸಕ್ಕೆ ಸೇವಕರನ್ನಿಟ್ಟುಕೊಂಡಳು. ಬಿಳಿ ಕುದುರೆಗಳ ಸಾರೋಟಿನಲ್ಲಿ ಓಡಾಡುತ್ತ ಅತ್ಯಂತ ಸುಖದಲ್ಲಿ ಬದುಕಿದಳು.

ಉಮ ಶ್ರೀಮಂತಳಾದುದು ಗೋಪಾಲ ಮತ್ತು ಕಮಲೆಯರಿಗೆ ತಿಳಿಯಿತು. ಶ್ರಾವಣ ಮಾಸ ಹತ್ತಿರವಾದಂತೆ ಕಮಲೆ ತನ್ನ ಗಂಡನಿಗೆ ಹೇಳಿದಳು. "ಉಮೆಯ ಮನೆಗೆ ಹೋಗಿ ಅವಳನ್ನೂ ಅವಳ ಮನೆಯವರನ್ನೂ ಕರೆದು ಬನ್ನಿ. ಬರಿಗೈಯ್ಯಲ್ಲಿ ಹೋಗಬೇಡಿ. ಸಿಹಿತಿಂಡಿಗಳನ್ನೂ ತೆಂಗಿನಕಾಯಿಗಳನ್ನೂ ತೆಗೆದುಕೊಂಡು ಹೋಗಿ. ಎಷ್ಟೆಂದರೂ ಅವಳು ನಿಮ್ಮ ಅಕ್ಕ ಅಲ್ಲವೆ?"

ಹಬ್ಬಕ್ಕೆ ಕರೆಯಲು ಗೋಪಾಲ ಉಮೆಯ ಮನೆಗೆ ಹೋದ. ಉಮೆ ತನ್ನ ತಮ್ಮನನ್ನು ಪ್ರೀತಿಯಿಂದ ಸತ್ಕರಿಸಿ ಹಬ್ಬಕ್ಕೆ ಬರಲು ಒಪ್ಪಿದಳು.

ಆವತ್ತು ಹಬ್ಬದ ಸಂಭ್ರಮದ ದಿನ. ಅತಿಥಿಗಳು ಬರಲು ಪ್ರಾರಂಭಿಸಿದರು. ಮಂತ್ರ, ಹಾಡು, ಹೂವು ಕರ್ಪೂರಗಳ ವಾಸನೆಯಿಂದ ಮನೆತುಂಬಿತ್ತು. ಇದ್ದಕ್ಕಿದ್ದಂತೆ ಕುದುರೆಗಳ ಹೆಜ್ಜೆ ಸಪ್ಪಳ ಕೇಳಿಸಿತು. ಬಾಗಿಲಿನ ಎದುರು ಸುಂದರವಾದ ಸಾರೋಟೊಂದು ಬಂದು ನಿಂತಿತು. ಎಲ್ಲರೂ ಮಾತು ನಿಲ್ಲಿಸಿ ಆಶ್ಚರ್ಯದಿಂದ ನೋಡಿದರು. ಒಬ್ಬ ಸೇವಕ ಇಳಿದು ಸಾರೋಟಿನ ಬಾಗಿಲು ತೆರೆದನು. ಬಂಗಾರದ ಬಣ್ಣದ ಕಾಲಿ ಪಿತಾಂಬರವುಟ್ಟ ಒಬ್ಬ ಮಹಿಳೆ ವಜ್ರದ ಆಭರಣಗಳನ್ನು ಧರಿಸಿ ಗಂಭೀರವಾಗಿ ಮನೆಯೊಳಗೆ ನಡೆದು ಬಂದಳು.

ಕಮಲೆಗೆ ಅತ್ತಿಗೆಯ ಗುರುತೇ ಸಿಗಲಿಲ್ಲ. ಅವಳು ನೋಡಲು ಎಷ್ಟು ಸುಂದರವಾಗಿದ್ದಳು ! ಉಮೆಯನ್ನು ಕಮಲೆ ಪ್ರೀತಿಯಿಂದ ಸ್ವಾಗತಿಸಿ ಗೌರವದಿಂದ ಒಳಗೆ ಕರೆದೊಯ್ದಳು. ಗೋಪಾಲ ಮೃದುವಾದ ಮೆತ್ತೆಯ ಮೇಲೆ ಅಕ್ಕನನ್ನು ಕರೆದೊಯ್ದು ಕೂರಿಸಿದ.

ಕಮಲೆ ಸಡಗರದಿಂದ ಬಗೆ ಬಗೆಯ ಸಿಹಿತಿಂಡಿಗಳನ್ನು ಬೆಳ್ಳಿಯ ತಟ್ಟೆಯ ಮೇಲಿಟ್ಟು ಕೊಟ್ಟಳು. ಉಮೆ ಮೃದುವಾಗಿ ನಕ್ಕಳು. ತಮ್ಮನ ಕಡೆ ತಿರುಗಿ ಇನ್ನೊಂದು ಮೆತ್ತೆಯನ್ನು ತಂದು ತನ್ನ ಪಕ್ಕದಲ್ಲಿಡುವಂತೆ ಹೇಳಿದಳು.

ಗೋಪಾಲ ಓಡಿ ಮೆತ್ತೆ ಹಾಕಿದ ಕುರ್ಚಿಯೊಂದನ್ನು ತಂದು ಅವಳ ಬಳಿ ಇಟ್ಟ. ಬಂಗಾರದ ಎಳೆಗಳಿಂದ ಕಸೂತಿ ಹಾಕಿದ ತನ್ನ ಕಾಲನ್ನು ಉಮೆ ತೆಗೆದು ಅದರ ಮೇಲೆ ಇಟ್ಟಳು. ಉಮೆಗೆ ಸೆಖೆಯಾಗುತ್ತಿರಬಹುದೆಂದು ಗೋಪಾಲ ಚಿಂತಿಸಿದ. ಕಮಲೆಯನ್ನು ಕರೆದು ಕಿವಿಯಲ್ಲಿ ಹೇಳಿದ. "ಓಡಿ ಹೋಗಿ ಒಂದು ಬೀಸಣಿಗೆಯನ್ನು ತೆಗೆದುಕೊಂಡು ಬಾ."

ಕಮಲೆ ಓಡಿ ಒಂದು ಬೀಸಣಿಗೆ ತಂದಳು. ಉಮೆಯ ಪಕ್ಕದಲ್ಲಿ ನಿಂತು ಮೃದುವಾಗಿ ಬೀಸಿದಳು.

ಆಮೇಲೆ ಉಮೆ ತನ್ನ ಆಭರಣಗಳನ್ನು ಒಂದೊಂದಾಗಿ ತೆಗೆದು ಪಕ್ಕದ ಕುರ್ಚಿಯ ಮೇಲಿಟ್ಟಳು. ಗೋಪಾಲ ಹೇಳಿದ. "ಅಕ್ಕ ಈ ಆಭರಣಗಳು ನಿನಗೆ ತುಂಬ ಭಾರವೆ?"

ಉಮೆ ಮಾತಾಡಲಿಲ್ಲ. ಎಲ್ಲ ಆಭರಣಗಳನ್ನು ತೆಗೆದಿಟ್ಟ ಮೇಲೆ ಒಂದೊಂದಾಗಿ ಸಿಹಿತಿಂಡಿಗಳನ್ನೆತ್ತಿ ಒಂದೋಂದು ಆಭರಣದ ಮೇಲೂ ಅವುಗಳನ್ನಿಟ್ಟಳು. ನೆರೆದಿದ್ದವರೆಲ್ಲರೂ ಬೆರಗಿನಿಂದ ಇದನ್ನು ನೋಡಿದರು. ಗೋಪಾಲ ದಿಗ್ಭ್ರಮೆಯಾಗಿ ಕೇಳಿದ. "ಅಕ್ಕಾ ಇದೇನು ನೀನು ಮಾಡುತ್ತಿರುವುದು?"

ಉಮೆ ನಕ್ಕಳು. "ಈ ಸಿಹಿತಿಂಡಿಗಳು ನಿಜವಾಗಿ ಯಾವ ಅತಿಥಿಗಳಿಗೆ ಸಲ್ಲಬೇಕೋ ಅವರಿಗದನ್ನು ನಾನು ಕೊಡುತ್ತಿದ್ದೇನೆ. ಇವು ನನಗೆಂದು ನೀವು ಕೊಟ್ಟದ್ದಲ್ಲ. ನನ್ನ ಬಟ್ಟೆ ಮತ್ತು



ಆಭರಣಗಳನ್ನು ನೋಡಿ ನೀವು ಕೊಟ್ಟದ್ದು. ನನ್ನ ಮಟ್ಟಿಗೆ ಬಾಳೆ ಎಲೆಯ ಮೇಲೆ ಒಂದಿಷ್ಟು ಪ್ರಸಾದವಿದ್ದರೆ ಸಾಕು. ಈ ಎಲ್ಲ ವರ್ಷಗಳೂ, ನನಗೂ ನನ್ನ ಮಕ್ಕಳಿಗೂ ಸಿಗುತ್ತಿದ್ದುದು ಅಷ್ಟೇ ತಾನೆ?"

ಎಲ್ಲರೂ ನಿಶ್ಶಬ್ದವಾಗಿ ಇದನ್ನು ಕೇಳಿಸಿಕೊಂಡರು, ಅತಿಥಿಗಳೆಲ್ಲ ಕಮಲೆ ಮತ್ತು ಗೋಪಾಲರ ಕಡೆ ನೋಡುತ್ತ ತಮ್ಮ ತಮ್ಮಲ್ಲೆ ಗುಸು ಗುಸು ಮಾತನಾಡಿಕೊಂಡರು. ಗೋಪಾಲ ಮತ್ತು ಕಮಲೆಯರಿಗೆ ಭೂಮಿ ಬಾಯಿ ಬಿಟ್ಟು ತಮ್ಮನ್ನು ನುಂಗಿಬಿಟ್ಟರೆ ವಾಸಿಯೆನಿಸಿತು.

ಅನಂತರ ಉಮೆ ಕನಿಕರದಿಂದ ಅವರಿಗೆ ಬುದ್ಧಿವಾದ ಹೇಳಿದಳು. ಪ್ರೀತಿಗೂ, ಶ್ರೀಮಂತಿಕೆಗೂ ಸಂಬಂಧವಿಲ್ಲ. ನಾನು ರೇಷ್ಮೆಯುಟ್ಟಿದ್ದರೂ ಸರಿಯೇ, ಚಿಂದಿಯುಟ್ಟಿದ್ದರೂ ಸರಿಯೇ, ಒಂದೇ ರೀತಿಯಲ್ಲಿ ನಿಮ್ಮನ್ನು ಕಂಡು ಆಶೀರ್ವದಿಸುತ್ತೇನೆ. ನಿಮ್ಮ ಮನೆ ಸದಾ ಸಮೃದ್ಧವಾಗಿರಲಿ. ನೀವು ಸುಖದಿಂದ ಬಾಳಿ."

# ಪ್ರಪಂಚದಲ್ಲಿ ಅತ್ಯಂತ ಮೃದುವಾದ ಹಾಸಿಗೆ

ಒಂದಾನೊಂದು ಕಾಲದಲ್ಲಿ ಒಬ್ಬ ರಾಣಿಯಿದ್ದಳು. ಅವಳ ಹೆಸರು ಮೀನಾಕ್ಷಿ. ತನಗೆ ರಾತ್ರಿ ನಿದ್ದೆ ಬರುವುದಿಲ್ಲವೆಂದು ಅವಳು ಸದಾ ದೂರುತ್ತಿದ್ದಳು. ರಾತ್ರಿಯೆಲ್ಲ ನಿದ್ದೆಯಿಲ್ಲದೆ ಅವಳು ಹೊರಳಾಡುತ್ತಿದ್ದುದರಿಂದ ದಿನವಿಡೀ ಅವಳು ಸಿಡುಕಿನಿಂದ ಇರುತ್ತಿದ್ದಳು. ಅವಳ ಸುಂದರ ವಾದ ಮುಖ ಅತೃಪ್ತಿಯಿಂದ ಅಂದಗೆಟ್ಟಿತ್ತು. ಅವಳು ಯಾವಾಗಲೂ ಗೊಣಗುತ್ತಿದ್ದಳು. "ನನ್ನ ಹಾಸಿಗೆ ಸಾಕಷ್ಟು ಮೃದುವಾಗಿಲ್ಲ. ಆದ್ದರಿಂದ ನಾನು ನಿದ್ದೆಮಾಡಲಾರೆ."

ದೂರದೂರದ ದೇಶಗಳಿಗೆ ರಾಜ ತನ್ನ ಸೇವಕರನ್ನು ಕಳಿಸಿದ. ಅಲ್ಲಿಂದ ಅವರು ಅತ್ಯಂತ ಮೃದುವಾದ ಬೂರುಗದ ಹತ್ತಿಯನ್ನು ತಂದರು. ರಾಜನ ಮುಖ್ಯ ದರ್ಜಿ ಅತ್ಯಂತ ಮೃದು ವಾದ ರೇಷ್ಮೆಯಲ್ಲಿ ಈ ಹತ್ತಿಯಿಂದ ಹಾಸಿಗೆ ಮಾಡಿ ರಾಣಿಗೆ ಕೊಟ್ಟ. ಆದರೆ ಮೀನಾಕ್ಷಿಗೆ ತೃಪ್ತಿಯಾಗಲಿಲ್ಲ. "ಇದು ತುಂಬ ಒರಟು" ಎಂದು ಅವಳು ಗೊಣಗಿದ್ದಳು." ಇದಕ್ಕಿಂತ ಮೃದುವಾದ ಹಾಸಿಗೆಯನ್ನು ನೀವು ನನಗೆ ಹೊಲಿದು ಕೊಡದಿದ್ದರೆ, ನಾನು ಖಾಯಿಲೆಯಾಗಿ ಸಾಯುತ್ತೇನೆ, ಅಷ್ಟೆ. ನಿದ್ದೆಯಿಲ್ಲದೆ ಯಾರೂ ಬದುಕಲಾರರು".

ರಾಜನಿಗೆ ಯೋಚನೆಗಿಟ್ಟುಕೊಂಡಿತು. ತನ್ನ ತೋಟದಲ್ಲಿ ಅತ್ಯಂತ ದುಃಖಿತನಾಗಿ ಅವನು ತಿರುಗಿದ. ಏನು ಮಾಡುವುದೆಂದು ಅವನಿಗೆ ಹೊಳೆಯಲೇ ಇಲ್ಲ. ಆಗ ಅವನ ಮುಖ್ಯ ಮಂತ್ರಿ ಗೌರವದಿಂದ ತಲೆಬಾಗಿ ಹೇಳಿದ. "ಮಹಾಪ್ರಭು, ನನಗೊಂದು ವಿಚಾರ ಈಗ ತಾನೇ ಹೊಳೆ ದಿದೆ. ನಿಮ್ಮ ಪ್ರೀತಿಯ ರಾಣಿಗೆ ಬೇಕಾದ ಮೃದುವಾದ ಹಾಸಿಗೆಯನ್ನು ನಾನು ಮಾಡಿಸಿ ಕೊಡುತ್ತೇನೆ."

ರಾಜನಿಗೆ ತುಂಬ ಹರ್ಷವಾಯಿತು. ಅವನಿಗೆ ಹೊಳೆದ ಉಪಾಯವನ್ನು ವಿವರಿಸುವಂತೆ ಮುಖ್ಯ ಮಂತ್ರಿಯನ್ನು ಕೇಳಿದನು.

ಮುಖ್ಯ ಮಂತ್ರಿಯು ವಿವರಿಸಿದ. "ಮಹಾಪ್ರಭು, ಅರಮನೆಯ ತೋಟದಲ್ಲಿ ನೂರಾರು ಬಗೆಯ ಹೂಗಳಿವೆ. ಹಾಲಿಗಿಂತ ಬಿಳಿಯದಾದ ಮಂಜಿಗಿಂತ ಮೃದುವಾದ ಜಾಜಿ. ಮಲ್ಲಿಗೆ. ಸೇವಂತಿಗೆ ಇತ್ಯಾದಿ ಪುಷ್ಪಗಳು ಇವೆ.

ಪ್ರತಿ ಸಂಜೆಯೂ ಅರಳುವ ಮುಂಚೆ ಅವುಗಳನ್ನು ಕೊಯ್ಯುವಂತೆ ನಾವು ತೋಟಗಾರರಿಗೆ ಹೇಳಬಹುದು. ಆಮೇಲೆ ಅವುಗಳಲ್ಲಿ ಅತ್ಯಂತ ಮೃದುವಾದುವುಗಳನ್ನು ಆರಿಸಿ ರಾಣಿಯ ಶಯ್ಯೆಯ ಮೇಲೆ ಹರಡಬಹುದು. ಆಗ ಅವಳ ಹಾಸಿಗೆ ಅತ್ಯಂತ ಮೃದುವಾಗಿರುತ್ತದೆ, ಅಲ್ಲದೆ ಸೂರ್ಯ ಹುಟ್ಟುತ್ತಿದ್ದಂತೆ ಮೊಗ್ಗುಗಳು ಅರಳಿ ಇಡೀ ಕೊಠಡಿಯನ್ನೇ ಸುವಾಸನೆಯಿಂದ ತುಂಬುತ್ತವೆ. ಖಂಡಿತ ಇದರಿಂದ ರಾಣಿಗೆ ತೃಪ್ತಿಯಾಗಬಹುದು."

ರಾಜ ಇದಕ್ಕೆ ಒಪ್ಪಿದ. ಮಾರನೆಯ ದಿನ ಮುಖ್ಯ ಮಾಲಿಗೆ ರಾಜಾಜ್ಞೆ ತಲ್ಪಿತು. ಸಾಯಂಕಾಲ ಸೂರ್ಯ ಮುಳುಗುತ್ತಿದ್ದಂತೆ, ಅವನು ಅತ್ಯುತ್ತಮ ಮೊಗ್ಗುಗಳನ್ನು ಆರಿಸಿದ. ರಾಣಿಯ ಸೇವಕರು ಇವುಗಳನ್ನು ಅವಳ ಹಾಸಿಗೆಯ ಮೇಲೆ ಯಥೇಚ್ಛವಾಗಿ ಹರಡಿದರು. ಆ ದಿನ ರಾತ್ರಿ ರಾಣಿಗೆ ಗಾಢವಾದ ನಿದ್ರೆ ಬಂತು. ರಾಜನಿಗೆ ಇದರಿಂದ ತುಂಬ ಸಂತೋಷವಾಯಿತು. ಈ ಉಪಾಯವನ್ನು ಸೂಚಿಸಿದ ಮುಖ್ಯ ಮಂತ್ರಿಯನ್ನು ಬಹುಮಾನಿಸಿದ.

ಆಮೇಲೆ ಪ್ರತಿದಿನವೂ ಸೂರ್ಯ ಮುಳುಗುತ್ತಿದ್ದಂತೆ ಅತ್ಯಂತ ಸುಂದರವಾದ ಮೊಗ್ಗುಗಳನ್ನು ಆರಿಸಿ ರಾಣಿಯ ಹಾಸಿಗೆಯನ್ನು ಸಿದ್ಧಪಡಿಸಲಾಗುತ್ತಿತ್ತು. ಸದಾ ಸಿಡುಕಿನಿಂದಿರುತ್ತಿದ್ದ ರಾಣಿಯ ಮುಖ ಅರಳಿ ಪ್ರಸನ್ನವಾಯಿತು. ತನ್ನನ್ನು ಕಾಡುತ್ತಿದ್ದ ಸಮಸ್ಯೆ ಕೊನೆಗೂ ಬಗೆಹರಿಯಿತೆಂದೂ ರಾಜನೂ ಬಹಳ ಸಂತೋಷಪಟ್ಟನು.

ಆದರೆ ಸ್ವಲ್ಪ ದಿನಗಳಾದ ಮೇಲೆ. ಒಂದು ದಿನ ಬೆಳಗಿನ ಜಾವ ರಾಣಿಯ ಕೋಣೆಯಿಂದ ಆಕ್ರಂದನ ಕೇಳಿಸಿತು. ರಾಣಿಯ ಸೇವಕರು ಓಡಿಬಂದು ನೋಡಿದರು. ಮಹಾರಾಣಿ ಮೀನಾಕ್ಷಿ ಹಾಸಿಗೆಯಲ್ಲಿ ಎದ್ದು ಕೂತು ತನ್ನ ಬೆನ್ನನ್ನು ಉಜ್ಜಿಕೊಳ್ಳುತ್ತಾ ಕೋಪದಿಂದ ಕುದಿಯುತ್ತಿದ್ದಳು.

ರಾಜನು ತವಕದಿಂದ ಓಡಿಬಂದು ಏನು ತಪ್ಪಾಯಿತೆಂದು ಕೇಳಿದನು. ರಾಣಿಯ ಸೇವಕಿಯರು ಹೆದರಿಕೆಯಿಂದ ನಡುಗುತ್ತಾ ನಿಂತರು.



ಮೀನಾಕ್ಷಿ ಕೋಪದಿಂದ ಕೇಳಿದಳು. "ನಿನ್ನೆ ರಾತ್ರಿ ನನ್ನ ಹಾಸಿಗೆಯನ್ನು ಮಾಡಿದವರು ಯಾರು?"

ಸೇವಿಕೆಯರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಅವರಲ್ಲೊಬ್ಬಳು ಅಂಜುತ್ತಂಜುತ್ತ ಉತ್ತರ ಕೊಟ್ಟಳು: "ಮಹಾರಾಣಿ, ನಾವೆಲ್ಲರು ಕೂಡಿಯೇ ಹಾಸಿಗೆ ಮಾಡಿದೆವು."

"ಹಾಗೋ, ನಿಮ್ಮ ತಪ್ಪನ್ನು ಒಪ್ಪಿಕೊಂಡಿರಲ್ಲ—ಸಂತೋಷ ನಿಮ್ಮ ಕರ್ತವ್ಯವನ್ನು ನೀವು ಸರಿಯಾಗಿ ಮಾಡಿಲ್ಲ. ನನ್ನ ಹಾಸಿಗೆಯಲ್ಲೇನೋ ಗಟ್ಟಿಯಾಗಿದ್ದಿತು. ನನ್ನ ಬೆನ್ನು ಗಾಯವಾಗಿ ಕೆಂಪಾಗಿದೆ. ನಾನು ರಾತ್ರಿ ಇಡೀ ರೆಪ್ಪೆ ಮುಚ್ಚಲಿಲ್ಲ" ಮೀನಾಕ್ಷಿ ಮುನಿಸಿನಿಂದ ಮಾತಾಡಿದಳು.

ತಾವು ತುಂಬ ನಿಗ ವಹಿಸಿ ಹಾಸಿಗೆಯನ್ನು ಮಾಡಿದ್ದುದಾಗಿ ಸೇವಿಕೆಯರು ಅರಿಕೆಮಾಡಿಕೊಂಡರು. ಆದರೆ ರಾಣಿ ಅವರ ಮಾತನ್ನು ಒಪ್ಪಲಿಲ್ಲ. ಆಗ ರಾಜ ಹಾಸಿಗೆಯನ್ನು ಸರಿಯಾಗಿ ಶೋಧಿಸಿ ಪತ್ತೆಮಾಡಬೇಕೆಂದು ಆಜ್ಞಾಪಿಸಿದನು.

ಹಾಸಿಗೆಯನ್ನು ಸಂಪೂರ್ಣ ಶೋಧಿಸಿದ್ದಾಯಿತು. ಪ್ರತಿ ಹೂವನ್ನೂ ಪರೀಕ್ಷಿಸಿದ್ದಾಯಿತು. ಕೊನೆಗೆ ಸುವಾಸನಾಭರಿತವಾದ ಈ ಹೂವುಗಳ ರಾಶಿಯಲ್ಲಿ ಅರಳದೇ ಉಳಿದಿದ್ದ ಒಂದು ಮೊಗ್ಗು ಕಾಣಿಸಿತು. ಅದು ಇನ್ನೂ ದಳಗಳನ್ನು ಬಿಚ್ಚಿಕೊಳ್ಳದೆ ಗಟ್ಟಿಯಾಗಿ ಉಳಿದಿತ್ತು.

ರಾಜ ಕೋಪದಿಂದ ಕುದಿದ. ಎಚ್ಚರಿಕೆಯಿಂದ ಯಾಕೆ ಮೊಗ್ಗುಗಳನ್ನು ಆರಿಸಿಲ್ಲವೆಂದು ಸೇವಕಿಯರ ಮೇಲೆ ರೇಗಾಡಿದ. ಕೋಪದಲ್ಲಿ ಅವರೆಲ್ಲರನ್ನೂ ಮತ್ತು ತನ್ನ ತೋಟದ ಮಾಲಿಯನ್ನೂ ಸಹ ಕೆಲಸದಿಂದ ವಜಮಾಡಿದ.

ರಾಣಿಗೆ ಇದರಿಂದ ತೃಪ್ತಿಯಾಗಲಿಲ್ಲ. ಅವಳು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. "ಈ ಜಾಗದಲ್ಲಿ ನಾನು ಇನ್ನೊಂದು ಕ್ಷಣದಲ್ಲಿ ಇರಲಾರೆ. ನನ್ನ ಸೋದರನ ಮನೆಗೆ ನಾನು ಈ ಕ್ಷಣ ಹೊರಟು ಹೋಗುತ್ತೇನೆ.





ರಾಜ, ಮುಖ್ಯ ಮಂತ್ರಿ. ಸಭಿಕರು ಎಲ್ಲರೂ ಒಟ್ಟಾಗಿ ರಾಣಿಯ ಮನಸ್ಸನ್ನು ಬದಲಾಯಿಸಲು ಬಹಳ ಪ್ರಯತ್ನ ಪಟ್ಟರು. ಆದರೆ ಅವಳು ಯಾರ ಮಾತನ್ನೂ ಕೇಳಿಸಿಕೊಳ್ಳಲಿಲ್ಲ. ಆದ್ದರಿಂದ ಅವಳ ಪ್ರಯಾಣಕ್ಕೆ ರಾಜ ಸಿದ್ಧತೆಗಳನ್ನು ಮಾಡಲೇಬೇಕಾಯಿತು. ಮೀನಾಕ್ಷಿಯ ಸೋದರ ಸಮುದ್ರದಾಚೆ ದೂರದ ಊರಿನಲ್ಲಿ ರಾಜನಾಗಿದ್ದ. ಆದ್ದರಿಂದ ಪ್ರಯಾಣ ಅತ್ಯಂತ ಅಪಾಯಕಾರಿಯಾದುದಾಗಿತ್ತು.

ರಾಜ ತನ್ನ ರಾಣಿಗೆಂದು ಒಂದು ಸುಖಕರವಾದ ಹಡಗನ್ನು ಕಟ್ಟಿಸಿ ಅನೇಕ ಸೇವಕರುಗಳ ಜೊತೆ ಅವಳನ್ನು ಕಳುಹಿಸಿಕೊಟ್ಟನು. ಅವಳನ್ನು ಸುರಕ್ಷಿತವಾಗಿ ಕರೆದುಕೊಂಡು ಹೋದರೆ ಚೀಲಗಟ್ಟಲೆ ಬಂಗಾರವನ್ನು ಅವರಿಗೆ ಬಹುಮಾನವಾಗಿ ಕೊಡುವುದಾಗಿ ಆಶ್ವಾಸನೆಯಿತ್ತನು.

ಪ್ರಯಾಣ ಆರಂಭದಲ್ಲಿ ಸುಖವಾಗಿತ್ತು. ಮೃದುವಾದ ಸಮುದ್ರವ ಹವ ರಾಣಿಯ ಕೋಪವನ್ನು ತಣಿಸಿತು. ಅವಳ ಮುಖ ಮತ್ತೆ ಅರಳಿತು. ಆದರೆ ಮೂರನೆಯ ದಿನವೇ ಸಮುದ್ರ

ಕ್ಷುಬ್ಧವಾಯಿತು. ಕೆಲವು ನಿಮಿಷಗಳಲ್ಲೇ ಹಡಗು ಮುಳುಗುವುದಕ್ಕೆ ಶುರುವಾಯಿತು. ಪ್ರತಿಯೊಬ್ಬರೂ ಸಮುದ್ರಕ್ಕೆ ಜಿಗಿದು ಬಿಟ್ಟರು. ಮೀನಾಕ್ಷಿ ಬದುಕಿ ಉಳಿದದ್ದು ಒಂದು ಸೋಜಿಗ, ಹಲಗೆಯೊಂದನ್ನು ಭದ್ರವಾಗಿ ಅವಚಿಕೊಂಡು ಸಮುದ್ರದ ಅಲೆಗಳ ಜೊತೆ ಗಂಟೆಗಟ್ಟಲೆ ತೇಲಿ ಹೋದಳು. ಕೊನೆಯಲ್ಲಿ ಕಂಡರಿಯದ ದೇಶವೊಂದರಲ್ಲಿ ಬಂದು ಬಿದ್ದಳು. ಅವಳು ತುಂಬಾ ದಣಿದಿದ್ದಳು. ಆದರೆ ಹತ್ತಿರದಲ್ಲೇ ಒಂದು ಸಣ್ಣ ಗುಡಿಸಲನ್ನು ಕಂಡು ಅದರ ಬಳಿ ತೆವಳುತ್ತಾ ಹೋದಳು. ಅಲ್ಲಿ ಒಬ್ಬ ಮುದುಕ, ಅವನ ಹೆಂಡತಿ ವಾಸಮಾಡಿಕೊಂಡಿದ್ದರು.



ತನ್ನ ಕಷ್ಟಗಳನ್ನು ಮೀನಾಕ್ಷಿ ಅವರಿಗೆ ಹೇಳಿಕೊಂಡಳು. ಆದರೆ ತಾನು ರಾಣಿಯೆಂದು ಅವರಿಗೆ ಹೇಳಲಿಲ್ಲ. ಆಹಾರ ಮತ್ತು ಆಶ್ರಯ ನೀಡುವಂತೆ, ಅವರನ್ನು ಬೇಡಿಕೊಂಡಳು.

ಅವರು ಒಪ್ಪಿದರು. "ನಿನಗೆ ಇಷ್ಟವಿದ್ದಷ್ಟು ದಿನ ನಮ್ಮ ಜೊತೆಯಿರಬಹುದು. ನಾವೂ ಮುದುಕರಾಗಿದ್ದೇವೆ. ಆದ್ದರಿಂದ ನಿನ್ನಂತಹ ಚಿಕ್ಕವಳೊಬ್ಬಳ ಸಹಾಯವಿದ್ದರೆ ನಮಗೂ ಅನು ಕೂಲ."

ದಂಪತಿಗಳು ದುಡಿಯಲಾರದಷ್ಟು ಮುದುಕರಾಗಿದ್ದರು. ಆದ್ದರಿಂದ ಮೀನಾಕ್ಷಿ ತಾನೇ ದುಡಿದು ಅವರನ್ನು ಸಾಕುತ್ತೇನೆಂದು ಹೇಳಿದಳು. ಹತ್ತಿರದಲ್ಲೇ ಒಂದು ನದಿಗೆ ಅಣೆಕಟ್ಟೆಯನ್ನು ಕಟ್ಟಲಾಗುತ್ತಿತ್ತು. ನೂರಾರು ಜನ ಕೂಲಿಗಳು ಕೆಲಸಮಾಡುತ್ತಿದ್ದರು. ತಾನೂ ಅಲ್ಲಿ ಹೋಗಿ ದುಡಿದು ಸಂಪಾದಿಸುವೆನೆಂದು ಮೀನಾಕ್ಷಿ ತೀರ್ಮಾನಿಸಿದಳು. ಆದರೆ ಕಠಿಣವಾದ ದೈಹಿಕ ಶ್ರಮ ಅವಳಿಗೆ ಸಾಧ್ಯವೆ? ಒಂದು ಮೊಗ್ಗಿನ ಮೇಲೆ ಮಲಗುವುದೇ ಅವಳಿಗೆ ಹಿಂದೆ ಕಷ್ಟದ ವಿಷಯವಾಗಿತ್ತು. ಮೀನಾಕ್ಷಿ ಅತ್ತಳು. ಆದರೆ ಅವಳಿಗೆ ಬೇರೆ ಮಾರ್ಗವಿರಲಿಲ್ಲ. ಅಣೆಕಟ್ಟಿನಲ್ಲಿ ಕೆಲಸವನ್ನು ಸಂಪಾದಿಸಿ ಉಳಿದ ಕೂಲಿಗಳ ಜೊತೆ ಅವಳು ದುಡಿಯಲಿಕ್ಕೆ ಪ್ರಾರಂಭಿಸಿದಳು. ಎಲ್ಲರಂತೆಯೇ ಅವಳಿಗೆ ದಿನಗೂಲಿ ಸಿಗುತ್ತಿತ್ತು. ಅತ್ಯಂತ ಸರಳವಾದ ಆಹಾರ, ಒರಟಾದ ಬಟ್ಟೆ—ಇಷ್ಟೇ ಅವಳಿಗೆ ದಕ್ಕುತ್ತಿತ್ತು. ಉಳಿದ ಹಣವನ್ನು ಮುದುಕ ದಂಪತಿಗಳನ್ನು ಸಾಕಲು ಖರ್ಚು ಮಾಡುತ್ತಿದ್ದಳು. ನಿತ್ಯರಾತ್ರಿ ನೆಲದ ಮೇಲೆ ಹಾಸಿದ ಹುಲ್ಲಿನ ಚಾಪೆಯ ಮೇಲೆ ಅವಳು ಮಲಗುತ್ತಿದ್ದಳು. ಪ್ರತಿದಿನವೂ ಕಷ್ಟದ ದುಡಿಮೆಯಿಂದ ಬಳಲಿರುತ್ತಿದ್ದ ಅವಳು ದಿಂಬಿನ ಮೇಲೆ ತನ್ನ ತಲೆಯನ್ನು ಇಡುತ್ತಿದ್ದಂತೆಯೇ ನಿದ್ದೆ ಹೋಗುತ್ತಿದ್ದಳು.

ಒಂದು ದಿನ ಆ ದೇಶದ ರಾಜ ಅಣೆಕಟ್ಟನ್ನು ನೋಡಲು ಬಂದ. ಕೆಲಸ ಹೇಗೆ ಮುಂದು ವರಿಯುತ್ತಿದೆಯೆಂಬುದನ್ನು ತಾನೇ ಖುದ್ದು ನೋಡುವ ಆಸೆ ಅವನಿಗೆ. ಆ ಸಂಜೆ, ದಿನಗೂಲಿ ಹಂಚುವ ಸಮಯವಾದೊಡನೆ, ತಾನೇ ಸ್ವತಃ ದುಡ್ಡನ್ನು ಹಂಚುವುದೆಂದು ರಾಜ ನಿರ್ಧರಿಸಿದ. ಮೀನಾಕ್ಷಿಯ ಸರದಿ ಬಂದೊಡನೆ ಅವಳು ತನ್ನ ಕೂಲಿಯನ್ನು ಪಡೆಯಲು ಮುಂದೆ ಬಂದಳು. ರಾಜ ಅವಳನ್ನು ನೋಡಿದ. ಮತ್ತೊಮ್ಮೆ ಅವಳನ್ನು ನೋಡಿದ. ಆಶ್ಚರ್ಯದಿಂದ ಅವಳನ್ನು ದುರುಗುಟ್ಟಿ ನೋಡಿದ. ತೇಪೆ ಹಾಕಿವ ಬಟ್ಟೆಯನ್ನು ಅವಳು ತೊಟ್ಟಿದ್ದರೂ ರಾಜನಿಗೆ ತನ್ನ ಸೋದರಿಯ ಗುರುತು ಸಿಕ್ಕಿತು.

ಅವನು ಧಾವಿಸಿ ಬಂದು ಮೀನಾಕ್ಷಿಯನ್ನು ಆಲಂಗಿಸಿದನು. ಇಬ್ಬರ ಕಣ್ಣುಗಳಿಂದಲೂ ಸಂತೋಷದಿಂದ ನೀರು ಹರಿಯಿತು. ಮೀನಾಕ್ಷಿಯು ನೀರಿನಲ್ಲಿ ಮುಳುಗಿ ಸತ್ತು ಹೋಗಿದ್ದಳೆಂದು ಎಲ್ಲರೂ ಇಷ್ಟು ದಿನ ತಿಳಿದಿದ್ದರು. ಈಗ ಎಲ್ಲರೂ ಆನಂದಪಟ್ಟರು. ರಾಜ ಮೀನಾಕ್ಷಿಯನ್ನು ಕಾತರದಿಂದ ನೋಡಿ ಹೇಳಿದ. "ನೀನು ತುಂಬ ಕಷ್ಟಗಳಿಗೆ ಒಳಗಾಗಿರಬೇಕು. ಎಷ್ಟೊಂದು ಬಡವಾಗಿ ಕಾಣಿಸುತ್ತಿದ್ದೀಯಾ? ನಿನ್ನ ಬಟ್ಟೆಗಳೆಲ್ಲ ಹರಿದು ಚಿಂದಿಯಾಗಿವೆ. ಈ ಪರಿಸ್ಥಿತಿಯಲ್ಲಿ ನಿನ್ನನ್ನು ನೋಡಲು ನನಗೆ ತುಂಬ ದುಃಖವಾಗುತ್ತದೆ. ಎಷ್ಟೊಂದು ಕಷ್ಟಗಳನ್ನು ನೀನು ಸಹಿಸಬೇಕಾಗಿ ಬಂದಿದೆಯೋ ನನಗೆ ತಿಳಿಯದು.

ರಾಣಿ ಮುಗುಳು ನಕ್ಕು ಉತ್ತರಿಸಿದಳು. "ನನಗೇನೂ ಕಷ್ಟಬಂದಿಲ್ಲ. ಈಗ ಸುಖಿಯಾಗಿದ್ದೇನೆ. ರಾಣಿಯಾಗಿದ್ದಾಗ ನಾನು ಸುಖದಲ್ಲಿ ಮುಳುಗಿರುತ್ತಿದ್ದುದರಿಂದ ನನಗೆ ತೃಪ್ತಿಯೇ ಇರಲಿಲ್ಲ. ಅತ್ಯಂತ ಮೃದುವಾದ ಹಾಸಿಗೆಯ ಮೇಲೆ ಮಲಗಿದರೂ ನನಗೆ ನಿದ್ದೆ ಬರುತ್ತಿರಲಿಲ್ಲ ನನ್ನನ್ನು ಸುಖವಾಗಿಡಲು ನನ್ನ ಗಂಡ ಎಷ್ಟು ಪ್ರಯತ್ನಪಟ್ಟರೂ ನನಗೆ ತೃಪ್ತಿಯಾಗಲಿಲ್ಲ. ಜನ ಎಷ್ಟು ಕಷ್ಟಪಟ್ಟು ಬದುಕುತ್ತಾರೆಂದು ಈಗ ನನಗೆ ಗೊತ್ತಾಗಿದೆ. ಅವರಂತೆ ಬಾಳಲು ವಿಧಿ ನನ್ನನ್ನು ಬಲಾತ್ಕರಿಸಿತು. ಕಷ್ಟಪಟ್ಟು ದುಡಿದು ಈಗ ನಾನು ಹುಲ್ಲಿನ ಚಾಪೆಯ ಮೇಲೆ ಮಲಗಿ ಗಾಢವಾಗಿ ನಿದ್ದೆ ಮಾಡುತ್ತಿದ್ದೇನೆ. ಸಾಕಷ್ಟು ಮೃದುವಾದ ಹಾಸಿಗೆಯಿಲ್ಲವೆಂದು ಈಗ ನಾನು ದೂರುವುದಿಲ್ಲ."

ಮೀನಾಕ್ಷಿ ಕ್ಷೇಮವಾಗಿದ್ದಾಳೆಂದು ಅವಳ ಸೋದರ ತನ್ನ ಭಾವನಿಗೆ ಕೂಡಲೇ ಹೇಳಿ ಕಳಿಸಿದ. ರಾಜನಿಗೆ ಅದರಿಂದ ಅತ್ಯಂತ ಸಂತೋಷವಾಗಿ ಹೆಂಡತಿಯನ್ನು ನೋಡಲು ಕೂಡಲೆ ಬಂದು ಮೀನಾಕ್ಷಿಗೆ ಸಂತೋಷವಾಗಲೆಂದು ತನ್ನ ಜೊತೆ ಬೆಲೆಯುಳ್ಳ ಉಡುಗರೆಗಳನ್ನೂ, ರುಚಿಕರವಾದ ತಿಂಡಿಗಳನ್ನೂ ತಂದಿದ್ದನು. ಮೊದಲಿಗಿಂತಲೂ ಮೀನಾಕ್ಷಿ ಈಗ ಸುಂದರವಾಗಿ ಕಂಡಿದ್ದರಿಂದ ಅವನಿಗೆ ಆಶ್ಚರ್ಯವಾಯಿತು. ಅವಳ ಮುಖ ಶಾಂತಿ ಮತ್ತು ತೃಪ್ತಿಯಿಂದ ಸುಂದರವಾಗಿತ್ತು. ಅವಳ ಮುಖದ ಮೇಲೆ ಸದಾ ಇರುತ್ತಿದ್ದ ಸಿಡುಕು ಸಂಪೂರ್ಣ ಮಾಯವಾಗಿತ್ತು.

ರಾಜ ಅವಳನ್ನು ಕೇಳಿದ. "ನೀನು ಈಚೆಗೆ ಚೆನ್ನಾಗಿ ನಿದ್ದೆಮಾಡುತ್ತಿರುವಂತೆ ನನಗೆ ಕಾಣುತ್ತದೆ. ನಿನ್ನ ಸೋದರ ಸಾಕಷ್ಟು ಮೃದುವಾದ ಹಾಸಿಗೆಯನ್ನು ನಿನಗೆ ಕೊಟ್ಟಿದ್ದಾನೋ? ಈ ಅದ್ಭುತವಾದ ಹಾಸಿಗೆಯನ್ನು ಅವನು ಎಲ್ಲಿಂದ ಪಡೆದ? ಏನಿದೆ ಈ ಹಾಸಿಗೆಯಲ್ಲಿ"

ಮೀನಾಕ್ಷಿ ಇದಕ್ಕೆ ಹೀಗೆ ಉತ್ತರಿಸಿದಳು. "ನೆಲದ ಮೇಲೆ ಹಾಸಿದ ಹುಲ್ಲಿನ ಚಾಪೆಯ ಮೇಲೆ ನಾನೀಗ ಮಲಗುತ್ತಿದ್ದೇನೆ"



# ಸತ್ತ ಇಲಿ ತಂದ ಐಶ್ವರ್ಯ

ಬಹಳ ವರ್ಷಗಳ ಹಿಂದೆ ವಾರಣಾಸಿಯೆಂಬ ಪಟ್ಟಣದಲ್ಲಿ ಚುಲ್ಲಕನೆಂಬ ಬಹಳ ದೊಡ್ಡ ವಿದ್ವಾಂಸ ನಿದ್ದನು. ಒಂದು ದಿನ ಅವನು ಧ್ಯಾನಮಾಡುತ್ತ ಹೋಗುತ್ತಿದ್ದಾಗ ದಾರಿಯ ಮಧ್ಯದಲ್ಲಿ ಒಂದು ಸತ್ತ ಇಲಿಯನ್ನು ಕಂಡನು.

ಕೂಡಲೇ ಅವನು ಗೊಣಗಿದ. "ಎಂಥಹ ಹೇಸಿಗೆಯ ದೃಶ್ಯವಿದು ! ಆದರೆ ಒಂದು ಸತ್ತ ಇಲಿಯಿಂದಲೂ ಕೂಡ ಸಂತೋಷವುಂಟಾಗಬಹುದು. ಒಬ್ಬ ಜಾಣನಾದ ಮನುಷ್ಯ ಇದನ್ನು ಸರಿಯಾಗಿ ಉಪಯೋಗಿಸಿಕೊಂಡರೆ ಶ್ರೀಮಂತನೂ ಆದಾನು."

ಆ ದಾರಿಯಲ್ಲೇ ನಡೆದುಹೋಗುತ್ತಿದ್ದ ಹರಿ ಎಂಬ ಒಬ್ಬ ಬಡ ಯುವಕನ ಕಿವಿಯ ಮೇಲೆ ಈ ಮಾತು ಬಿದ್ದವು. ಅವನು ಹೀಗೆ ಯೋಚಿಸಿದ. "ಈ ಮನುಷ್ಯ ಬಹಳ ದೊಡ್ಡ ತತ್ವಜ್ಞಾನಿ. ಇವನು ಆಡಿದ ಮಾತಿನಲ್ಲಿ ಅರ್ಥವಿರಲೇಬೇಕು." ಹೀಗೆಂದುಕೊಂಡು ಅವನು ಆ ಸತ್ತ ಇಲಿ ಯನ್ನು ಎತ್ತಿಕೊಂಡನು.

ಈ ಸತ್ತ ಇಲಿಯನ್ನು ಹೇಗೆ ಉಪಯೋಗಿಸಬೇಕೆಂದು ಹರಿ ಯೋಚಿಸುತ್ತಿದ್ದಾಗ ಅವನಿಗೆ ಒಂದು ವಿಚಾರ ಹೊಳೆಯಿತು. "ಬೆಕ್ಕಿಗೆ ಇಲಿಯೆಂದರೆ ಪಂಚಪ್ರಾಣ. ನನ್ನ ಪಕ್ಕದ ಮನೆಯವನ ಬೆಕ್ಕು ತಿನ್ನಲು ಇಲಿ ಇಲ್ಲದೆ ತುಂಬ ಬಡವಾಗಿದೆ. ಈ ಇಲಿಯನ್ನು ತೆಗೆದುಕೊಂಡು ಹೋಗಿ ಕೊಟ್ಟರೆ ಅದಕ್ಕೆ ಹಬ್ಬವಾದಂತೆ.

ಹರಿ ಸೀದಾ ತನ್ನ ಪಕ್ಕದ ಮನೆಯವನ ಬಳಿ ಹೋಗಿ ಇಲಿಯನ್ನು ತೋರಿಸಿದ. ಅವನಿಗೆ ತುಂಬ ಸಂತೋಷವಾಯಿತು.



ಅವನು ಹರಿಯನ್ನು ಕೇಳಿದ. "ಈ ಸತ್ತ ಇಲಿ ನಿನಗೆ ಎಲ್ಲಿ ಸಿಕ್ಕಿತು ? ಅದನ್ನು ನನಗೆ ಕೊಡು. ಈ ಹಣವನ್ನು ತೆಗೆದುಕೋ.

ಹರಿ ಅವನಿಂದ ದುಡ್ಡನ್ನು ತೆಗೆದು ಕೊಂಡು ಒಂದು ಅಂಗಡಿಗೆ ಹೋದ. ಅಲ್ಲಿ ಮಿಠಾಯಿಗಳನ್ನು ಕೊಂಡುಕೊಂಡನು. ಒಂದು ಚೆಂಬಿನಲ್ಲಿ ನೀರನ್ನೂ ಮಿಠಾಯಿ ಗಳನ್ನೂ ತೆಗೆದುಕೊಂಡು ಅವನು ಪಟ್ಟಣ ವನ್ನು ದಾಟಿ ಹೋದ. ಅಲ್ಲಿ ಸುಂದರ ವಾದ ಒಂದು ಹೂತೋಟವ ಬಾಗಿಲಲ್ಲಿ ವಿಶಾಲವಾದ ಒಂದು ಆಲದ ಮರವಿತ್ತು. ಹರಿಯು, ನೀರಿನ ಚೊಂಬನ್ನೂ, ಮಿಠಾಯಿ ಗಳ ಪೊಟ್ಟಣವನ್ನೂ ಕೆಳಗಿಟ್ಟು ಮರದ ನೆರಳಿನಲ್ಲಿ ಕೂತು ಕಾದ.

ಒಂದು ಗಂಟೆಯ ನಂತರ ತೋಟದಿಂದ ಒಬ್ಬ ಮಾಲಿಯು ಹೊರಗೆ ಬಂದನು. ದಿನವೆಲ್ಲ ದುಡಿದು ಅವನು ಬಳಲಿ ಹಸಿ ದಿದ್ದ. ಹರಿ ಅವನಿಗೆ ಮಿಠಾಯಿಯನ್ನೂ, ಒಂದು ಲೋಟ ನೀರನ್ನೂ ಕೊಟ್ಟ. ಮುದುಕನಿಗೆ ತುಂಬ ಸಂತೋಷವಾಗಿ ಅವನು ಹರಿಗೆ ಕೃತಜ್ಞತೆಯಿಂದ ಒಂದು ಗೊಂಚಲು ಹೂಗಳನ್ನು ಕೊಟ್ಟನು.

ಹರಿ ಹೂವುಗಳನ್ನು ಮಾರಿ ಇನ್ನಷ್ಟು ಮಿಠಾಯಿಗಳನ್ನು ಕೊಂಡನು. ಮತ್ತೆ ಹಿಂದಕ್ಕೆ ತೋಟದ ಬಾಗಿಲಿಗೆ ಬಂದು ಮರದ ನೆರಳಿನಲ್ಲಿ ಕಾದು ಕೂತನು. ಈ ಬಾರಿ ಹೊರಗೆ ಬಂದ ಎಲ್ಲ ತೋಟಗಾರ

ರಿಗೂ ಮಿಠಾಯಿಗಳನ್ನೂ ಹಂಚಿ ಅವರಿಂದ ತುಂಬ ಹೂವುಗಳನ್ನು ಪಡೆದನು. ಈ ಹೂವು ಗಳನ್ನು ಮಾರಿ ತುಂಬ ಮಿಠಾಯಿಗಳನ್ನು ಕೊಂಡನು. ಈ ಮಿಠಾಯಿಗಳನ್ನು ತೋಟಗಾರರಿಗಲ್ಲದೆ, ಹೂತೋಟವನ್ನು ನೋಡಲು ಬಂದವರಿಗೂ ಮಾರಿದನು. ಹೀಗೆ ನಿತ್ಯ ವ್ಯಾಪಾರ ಮಾಡಿ ಹರಿ ತುಂಬ ಹಣವನ್ನು ಗಳಿಸಿದನು.

ಒಂದು ರಾತ್ರಿ ಭಯಂಕರ ಬಿರುಗಾಳಿಯೆದ್ದಿತು. ಗುಡುಗು ಅಬ್ಬರಿಸಿತು; ಆಕಾಶದಲ್ಲಿ ಕಣ್ಣು ಕೋರೈಸುವಂತೆ ಮಿಂಚಿತು. ಮರಗಳೆಲ್ಲ ಓಲಾಡಿ ತರತರ ಗುಟ್ಟಿದವು. ಕರ್ಕಶವಾದ ಶಬ್ದ ಮಾಡುತ್ತಾ ರಂಬೆಗಳು ಮುರಿದು ಬಿದ್ದವು. ಎಲೆಗಳು ಉದುರಿದವು. ಹೂವುಗಳು ಅಜ್ಜಂಬಜ್ಜಿಯಾಗಿ ಚೆಲ್ಲಾಪಿಲ್ಲಿಯಾದವು.

ಮೂರನೆಯ ಬೆಳಿಗ್ಗೆ ಉದ್ಯಾನವನದ ಹುಲ್ಲು ಬಯಲೆಲ್ಲ ಉದುರಿದ ಎಲೆಗಳಿಂದ ಮುರಿದ ಟೊಂಗೆಗಳಿಂದ ಚೆಲ್ಲಾಪಿಲ್ಲಿಯಾದ ಹೂವಿನ ದಳಗಳಿಂದ ತುಂಬಿ ಹೋಗಿದ್ದವು. ತೋಟಗಾರರು ಕಂಗಾಲಾದರು. ರಾಜ ಉದ್ಯಾನವನವನ್ನು ಪರೀಕ್ಷಿಸಲು ಬರುವುದಕ್ಕಿಂತ ಮುಂಚೆ ಹೇಗೆ ತಾನೇ ಅವರು ಅದನ್ನು ಚೊಕ್ಕಮಾಡಲು ಸಾಧ್ಯ. ಈ ಪರಿಸ್ಥಿತಿಯಲ್ಲಿ ತೋಟವನ್ನು ರಾಜನು ನೋಡಿದ್ದೇ ಆದಲ್ಲಿ ಅವರೆಲ್ಲರನ್ನೂ ಅವನು ತಕ್ಷಣ ಕೆಲಸದಿಂದ ವಜಾ ಮಾಡುತ್ತಾನೆ. ತಾವು ಈಗ ಏನು ಮಾಡಲು ಸಾಧ್ಯವೆಂದು ಅವರು ಒಬ್ಬರನ್ನೊಬ್ಬರು ದಿಕ್ಕುಕಾಣದೆ ಪ್ರಶ್ನಿಸಿಕೊಂಡರು.

ಆಗ ಹರಿ ಮುಂದೆ ಬಂದು ಹೇಳಿದ. "ನೀವು ನನಗೆ ಸರಿಯಾದ ಕೂಲಿ ಕೊಡುವುದಾದರೆ, ಈ ತೋಟವನ್ನು ಚೊಕ್ಕಮಾಡಿಸುವ ಜವಾಬ್ದಾರಿ ನನ್ನದು." ತೋಟಗಾರರು ಇದಕ್ಕೆ ಸ್ವಲ್ಪವೂ ಅನುಮಾನಿಸದೆ ಒಪ್ಪಿಕೊಂಡರು.

ಮಕ್ಕಳಿಗೆ ಹರಿಯೆಂದರೆ ಪ್ರಾಣ. ಒಂದು ದೊಡ್ಡ ಗುಂಪು ಹುಡುಗ. ಹುಡುಗಿಯರನ್ನು ಸೇರಿಸಿ ಅವರಿಗೆ ಅವನು ಹೇಳಿದ: "ಅರ್ಧಗಂಟೆಯ ಒಳಗೆ ನೀವು ಈ ತೋಟವನ್ನು ಗುಡಿಸಬೇಕು. ಒಂದು ಚೂರೂ ಕಸ, ಕಡ್ಡಿಯಿಲ್ಲದಂತೆ ಚೊಕ್ಕಮಾಡಬೇಕು. ಇವತ್ತು ರಾಜ ಇಲ್ಲಿಗೆ ತನಿಖೆಗೆಂದು ಬರುತ್ತಾನೆ ನೆನಪಿರಲಿ."

ಆ ಕೂಡಲೇ ನೂರು ಹುಡುಗ, ಹುಡುಗಿಯರು ಕೆಲಸದಲ್ಲಿ ನಿರತರಾದರು. ಮರ. ಟೊಂಗೆಗಳನ್ನು ಗುಡಿಸಿ ಗುಡ್ಡೆ ಹಾಕಿದರು. ಇದು ಅವರಿಗೆ ಎಷ್ಟು ಖುಷಿಯ ಕೆಲಸವಾಗಿತ್ತು ! ಅರ್ಧ ಗಂಟೆಯ ಒಳಗೆ ಕಸಕಡ್ಡಿಯನ್ನೆಲ್ಲ ಗುಡಿಸಿ ತೋಟದ ಹೊರಗೆ ಒಂದು ದೊಡ್ಡ ಗುಡ್ಡೆಯನ್ನು ಮಾಡಿಟ್ಟಿದ್ದರು. ಹರಿ ಅವರಿಗೆ ಹೇಳಿದ. "ಈ ಗುಡ್ಡೆಯನ್ನು ಇನ್ನಷ್ಟು ದೂರ ಒಯ್ದು ಬಿಡೋಣ. ಅಲ್ಲವೆ?

ಅಲ್ಲಿಂದ ಕಲ್ಲು ಬೀರುವಷ್ಟು ದೂರದಲ್ಲೇ ಕುಂಬಾರನೊಬ್ಬನ ಗುಡಿಸಲಿತ್ತು. ಹರಿ ಮತ್ತು ಹುಡುಗರು ಕಸಕಡ್ಡಿಗಳನ್ನೆಲ್ಲ ಅವನಿದ್ದಲ್ಲಿಗೆ ಎತ್ತಿಕೊಂಡು ಹೋಗಿ ಗುಡ್ಡೆ ಹಾಕಿದರು. ಹರಿ ಕುಂಬಾರನಿಗೆ ಹೇಳಿದ. "ನಿನಗೆ ಒಂದು ತಿಂಗಳಿಗೆ ಸಾಕಾಗುವಷ್ಟು ಸೌಧೆ ಪುರಕಲು ತಂದಿದ್ದೇನೆ ನೋಡು." ಕುಂಬಾರನಿಗೆ ಖುಷಿಯಾಗಿ ಹರಿಗೆ ನಾಲ್ಕು ಚಿನ್ನದ ನಾಣ್ಯಗಳನ್ನು ಕೊಟ್ಟನು.

ಒಂದು ಕಸಕಡ್ಡಿಯೂ ಇಲ್ಲದಂತೆ ತೋಟ ಚೊಕ್ಕವಾಗಿದ್ದುದನ್ನು ನೋಡಿ ತೋಟಗಾರರು ಹರಿಗೆ ಹನ್ನೆರಡು ಚಿನ್ನದ ನಾಣ್ಯಗಳನ್ನು ಕೊಟ್ಟರು. ಹರಿಗೆ ತುಂಬ ಖುಷಿಯಾಯಿತು. ತುಂಬ ಕಡಿಮೆ ಕೆಲಸಕ್ಕೆ ಎರಡು ಕಡೆಯಿಂದಲೂ ಅವನಿಗೆ ದುಡ್ಡು ಸಿಕ್ಕಿತ್ತು. ತಾನು ಸಂಪಾದಿಸಿದ್ದರಲ್ಲಿ ಹದಿನೈದು ನಾಣ್ಯಗಳನ್ನು ಉಳಿಸಿಕೊಂಡು ಒಂದು ನಾಣ್ಯವನ್ನು ಖರ್ಚುಮಾಡಿ ಮಿತಾಯಿಗಳನ್ನು ಕೊಂಡನು. ತನಗೆ ಸಹಾಯಮಾಡಿದ ಮಕ್ಕಳಿಗೆ ಈ ಮಿತಾಯಿಗಳನ್ನು ಹಂಚಿದನು. ಮಕ್ಕಳು ಸಂತೋಷದಿಂದ ಕುಣಿದಾಡುತ್ತಾ ಹೊರಟು ಹೋದರು.

ಆಮೇಲೆ ಹರಿ ಎರಡು ಡಜನ್ನಿಗಳಿಗೂ ಹೆಚ್ಚು ಮಡಿಕೆಗಳನ್ನು ಕೊಂಡನು. ದಾರಿಬದಿಯಲ್ಲಿ ಒಂದು ಗುಡಿಸಲನ್ನು ಕಟ್ಟಿಕೊಂಡನು. ಈ ಮಡಿಕೆಗಳ ತುಂಬ ತಣ್ಣಗಿನ ನೀರನ್ನು ತುಂಬಿ "ಕುಡಿಯುವ ನೀರು" ಎಂದು ಬೋರ್ಡ್ ಹಾಕಿಕೊಂಡು ಕೂತನು.

ತಲೆಯ ಮೇಲೆ. ಹುಲ್ಲಿನ ಹೊರೆಗಳನ್ನು ಹೊತ್ತ ಐದನೂರು ಜನ ಆ ದಾರಿಯಲ್ಲಿ ನಡೆದು ಬಂದರು. ಅವರಿಗೆ ತುಂಬ ಸುಸ್ತಾಗಿತ್ತು. ಅವರ ಮುಖಗಳಿಂದ ಬೆವರಿಳಿಯುತ್ತಿತ್ತು. ಅವರು ಹರಿಯ ಗುಡಿಸಿಲಿನ ಎದುರು ನಿಂತು ಸುಧಾರಿಸಿಕೊಂಡರು. ಅವನು ಕೊಟ್ಟ ತಣ್ಣೀರನ್ನು ಕುಡಿದರು.

ಬಾಯಾರಿಕೆಯನ್ನು ತೀರಿಸಿಕೊಂಡ ನಂತರ ಅವರು ಅವನಿಗೆ ಹೇಳಿದರು: "ನೀನು ಕುಡಿಯಲು ಕೊಟ್ಟ ತಣ್ಣೀರಿಗಾಗಿ ನಾವು ನಿನ್ನನ್ನು ಎಷ್ಟು ವಂದಿಸಿದರೂ ಸಾಲದು. ನಿನಗೆ ನಾವು ಏನನ್ನು ತಾನೇ ಕೊಡಬಲ್ಲೆವು? ನಮ್ಮಲ್ಲಿ ಹಣವಿಲ್ಲ. ನಮ್ಮ ಹತ್ತಿರ ಇಷ್ಟು ಹುಲ್ಲಿದ್ದರೂ ಇದನ್ನು ಕೊಳ್ಳುವ ಗಿರಾಕಿಗಳು ನಮಗೆ ಕಾಣಿಸುತ್ತಿಲ್ಲ.

ಹರಿ ಅವರಿಗೆ ಹೇಳಿದ: "ನನಗೆ ಹಣಬೇಡ. ನೀವು ಒಬ್ಬೊಬ್ಬರೂ ನಿಮ್ಮ ಹೊರೆಗಳಿಂದ ಒಂದೊಂದು ಕಟ್ಟು ಹುಲ್ಲನ್ನು ಕೊಟ್ಟರೆ ಸಾಕು. ನಿಮಗೊಂದು ಸಂತೋಷದ ಸುದ್ದಿ ಹೇಳುತ್ತೇನೆ—ಕೇಳಿ. ಒಬ್ಬ ಕುದುರೆ ವ್ಯಾಪಾರಿ ಈ ಪಟ್ಟಣಕ್ಕೆ ಸದ್ಯದಲ್ಲೇ ಬರುವವನಿದ್ದಾನೆ. ನಿಮ್ಮ ಹುಲ್ಲನ್ನೆಲ್ಲಾ ಅವನು ಕೊಳ್ಳುತ್ತಾನೆ. ಆದರೆ ನೀವು ನನಗೊಂದು ಮಾತು ಕೊಡಬೇಕು—ನಾನು ನನ್ನ ಹುಲ್ಲನ್ನು ಮಾರಿದ ನಂತರ ನೀವು ಮಾರಬೇಕು."

ಅವರು ಅಲ್ಲಿಂದ ಬಿಟ್ಟೊಡನೆಯೇ ಕುದುರೆ ವ್ಯಾಪಾರಿಯೂ ಐದುನೂರು ಕುದುರೆಗಳ ಜೊತೆ ಅಲ್ಲಿಗೆ ಬಂದನು. ಅವನು ಪ್ರಯಾಣಮಾಡಿ ಬಂದ ಪ್ರದೇಶ ಬಂಜರಾಗಿ ಒಣಗಿದ್ದುದ ರಿಂದ ಅವನ ಕುದುರೆಗಳಿಗೆ ಹುಲ್ಲೇ ಸಿಕ್ಕಿರಲಿಲ್ಲ. ಆದ್ದರಿಂದ ಕೂಡಲೆ ಅವನು ಐನೂರು ಬೆಳ್ಳಿಯ ನಾಣ್ಯಗಳನ್ನು ಕೊಟ್ಟು ಹರಿಯಿಂದ ಐನೂರು ಹುಲ್ಲಿನ ಕಟ್ಟುಗಳನ್ನು ಕೊಂಡನು.

ಹೀಗೆಯೇ ಹರಿ ಬಾಯಾರಿ ಬಂದವರಿಗೆ ನೀರನ್ನು ಕೊಟ್ಟು ತುಂಬ ಹಣ ಸಂಪಾದನೆಯನ್ನು ಮಾಡಿ ಶ್ರೀಮಂತನಾದನು.

ಒಂದು ದಿನ ಅವನಿಗೆ ದೋಣಿಗಳಲ್ಲಿ ಸರಕುಗಳನ್ನು ತುಂಬಿಕೊಂಡು ಒಬ್ಬ ವರ್ತಕ ಬರುತ್ತಿದ್ದಾ ನೆಂಬ ಸುದ್ದಿ ತಿಳಿಯಿತು. ಅವನು ಕೂಡಲೇ ತನ್ನ ಹತ್ತಿರವಿದ್ದ ಹಣವನ್ನೆಲ್ಲಾ ಕೂಡಿಸಿ ಒಂದು ಸಾರೋಟನ್ನು ಕೊಂಡನು. ಈ ಸಾರೋಟನ್ನು ಹೂಗಳಿಂದ ಶೃಂಗರಿಸಿ ಬಂದರಿಗೆ ಖುಷಿ ಯಾಗಿ ಹಾಡುತ್ತಾ ಬಂದನು.

ಮೊದಲನೆಯ ದೋಣಿ ಬಂದರನ್ನು ತಲುಪಿದೊಡನೆಯೇ ಹರಿ ಕ್ಯಾಪ್ಟನ್ನನ್ನು ಕಂಡು ಅವನಿಗೊಂದು ಚಿನ್ನದ ಉಂಗುರವನ್ನು ಕೊಟ್ಟು ಹೀಗೆ ಹೇಳಿದನು: "ಇದು ಆರು ತಿಂಗಳ ಸಂಬಳಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದು. ನಿಮ್ಮ ದೋಣಿಗಳಲ್ಲಿರುವ ಎಲ್ಲ ಸರಕುಗಳನ್ನೂ ಕೊಳ್ಳಲು ನೀನು ನನಗೆ ಸಹಾಯಮಾಡಿದ್ದೇ ಆದಲ್ಲಿ ನಾನು ಇನ್ನಷ್ಟು ನಿನಗೆ ಕೊಡುತ್ತೇನೆ. ಕ್ಯಾಪ್ಟನ್ ಇದಕ್ಕೆ ಒಪ್ಪಿದನು.

ವರ್ತಕ ತನ್ನ ಸಾಮಾನುಗಳನ್ನೆಲ್ಲ ಇಳಿಸಿಕೊಂಡೊಡನೆಯೇ ಆ ಸ್ಥಳದಲ್ಲೇ ತನ್ನ ಮಾಲು ಗಳನ್ನೆಲ್ಲ ಕೊಳ್ಳಲು ತಯಾರಾದ ಒಬ್ಬ ಗಿರಾಕಿ ಇದ್ದುದನ್ನು ಕಂಡು ಅವನಿಗೆ ಸಂತೋಷ ವಾಯಿತು. ಈ ಸಾಮಾನುಗಳನ್ನೆಲ್ಲಾ ಸಂತೆಗೆ ತೆಗೆದುಕೊಂಡು ಹೋಗಿ ಚೌಕಾಸಿ ಮಾಡಿ ಮಾರುವ ಕಷ್ಟತಪ್ಪಿತೆಂದು ಅವನಿಗೆ ಆನಂದವಾಯಿತು.

ಅವನು ಹರಿಯ ಜೊತೆ ವ್ಯಾಪಾರ ಮಾಡುತ್ತಿದ್ದಾಗ ವ್ಯಾಪಾರಿಗಳ ಕಡೆಯಿಂದ ಜನರು ಬಂದರು. ತಮಗಿಂತ ಮೊದಲೇ ಹರಿ ಬಂದು ಹೀಗೆ ತಮ್ಮನ್ನು ಸೋಲಿಸಿಬಿಟ್ಟನೆಂದು ಅವರಿಗೆ ಸಿಟ್ಟುಬಂತು ಆದರೆ ಹರಿಗೆ ಅವರು ಎರಡರಷ್ಟು ಹಣವನ್ನು ಕೊಟ್ಟು ಆ ಸಾಮಾನುಗಳನ್ನು ಕೊಳ್ಳಬೇಕಾಯಿತು. ಈ ಹಣದಲ್ಲಿ ಅರ್ಧದಷ್ಟನ್ನು ಹರಿ ವರ್ತಕನಿಗೆ ಕೊಟ್ಟು ಅವನ ಲೆಕ್ಕವನ್ನು ಖುಲಾಸೆ ಮಾಡಿದನು. ಈ ವ್ಯಾಪಾರವನ್ನು ಸಾಧ್ಯವಾಗಿಸಿದ ಕ್ಯಾಪ್ಟನ್ನಿಗೂ ಐವತ್ತು ಚಿನ್ನದ

ನಾಣ್ಯಗಳನ್ನು ಕೊಟ್ಟನು. ಇಷ್ಟೆಲ್ಲಾ ಕೊಟ್ಟಾದ ಮೇಲೂ ಹರಿ ತುಂಬ ಲಾಭವನ್ನು ಮಾಡಿ ಕೊಂಡಿದ್ದನು.

ಅನಂತರ ಹರಿ ತತ್ವಜ್ಞಾನಿಯಾದ ಚುಲ್ಲಕನ ಹತ್ತಿರ ಹೋದನು. ಅವನ ಕಾಲಿಗೆ ಅಡ್ಡ ಬಿದ್ದು ಅವನ ಪಾದಗಳ ಬಳಿ ಒಂದು ಚೀಲ ಚಿನ್ನದ ನಾಣ್ಯಗಳನ್ನಿಟ್ಟನು.

ಇದೇನೆಂದು ಚುಲ್ಲಕ ಪ್ರಶ್ನಿಸಿದನು.

ನಾಲ್ಕು ತಿಂಗಳುಗಳ ಕೆಳಗೆ ನೀವು ಕೊಟ್ಟ ಹಿತವಚನಕ್ಕೆ ಪ್ರತಿಫಲವಾಗಿ ಇದನ್ನು ತಂದಿದ್ದೇನೆ” ಎಂದು ಹರಿ ಇಡೀ ಕಥೆಯನ್ನು ಹೇಳಿದನು.



ಚುಲ್ಲಕನಿಗೆ ಸಂತೋಷವಾದರೂ ಚಿನ್ನವನ್ನು ಅವನಿಂದ ಪಡೆಯಲು ಒಪ್ಪದೆ ಹೀಗೆ ಹೇಳಿದನು. "ದಾರಿಯಲ್ಲಿ ನಾನು ಆಡಿದ ಮಾತನ್ನು ಎಷ್ಟೋ ಜನ ಕೇಳಿಸಿಕೊಂಡರು. ಆದರೆ ಅದರಿಂದ ಉಪಯೋಗ ಪಡೆದವನು ನೀನೊಬ್ಬನೆ. ನಿನ್ನ ಐಶ್ವರ್ಯ ನಿಜವಾಗಿಯೂ ನಿನ ಬುದ್ಧಿವಂತಿಕೆಯ ಫಲ. ನೀನು ದುಡಿದಿರುವ ಪ್ರತಿ ಕಾಸೂ ನಿನಗೇ ಸೇರತಕ್ಕದ್ದು."



# ತೀರ್ಪು ಕೊಡುವ ಕುರ್ಚಿ

ಇತಿಹಾಸ ಪ್ರಸಿದ್ಧವೂ ಪುರಾತನವೂ ಆದ ಉಜ್ಜಯಿನಿ ಎಂಬ ಪಟ್ಟಣದ ಹೊರ ಪ್ರದೇಶದಲ್ಲಿ ಸಣ್ಣ ಪುಟ್ಟ ಗುಡ್ಡಗಳಿಂದ ಕೂಡಿದ ಒಂದು ವಿಶಾಲವಾದ ಬಯಲಿತ್ತು. ಒಂದು ದಿನ ಈ ಬಯಲು ಪ್ರದೇಶದಲ್ಲಿ ಒಂದು ಗುಂಪು ಹುಡುಗರು ಆಡುತ್ತಿದ್ದರು. ಆಗ ಒಬ್ಬ ಹುಡುಗ ಓಡಿ ಒಂದು ಗುಡ್ಡವನ್ನು ಹತ್ತಿದ. ಹತ್ತುತ್ತಿದ್ದಾಗ ಎಡವಿ ಬಿದ್ದ. ಎದ್ದವನೇ ತಾನೊಂದು ನುಣ್ಣನೆಯ ಕಲ್ಲಿನ ಚಪ್ಪಡಿಯನ್ನು ಎಡವಿ ಬಿದ್ದಿದ್ದೇನೆಂದು ತಿಳಿದ. ತನ್ನ ಸ್ನೇಹಿತರನ್ನೆಲ್ಲ ಕರೆದು ಅವನು ತಾನು ಎಡವಿದ ಕಲ್ಲಿನ ಆಸನವನ್ನು ತೋರಿಸಿದ. ಅನಂತರ ಆ ಕಲ್ಲಿನ ಮೇಲೆ ಕೂತು ಅವನು ಹೇಳಿದ: "ನಾನೊಬ್ಬ ರಾಜ. ನೀವು ನನ್ನ ಆಸ್ಥಾನದವರು ನಿಮ್ಮ ದೂರುಗಳೇನಿದ್ದರೂ ತನ್ನಿ. ನಾನು ತೀರ್ಪು ಕೊಡುತ್ತೇನೆ."

ಉಳಿದ ಹುಡುಗರಿಗೆ ಈ ಆಟ ಮೆಚ್ಚಿಕೆಯಾಯಿತು. ಒಬ್ಬೊಬ್ಬರಾಗಿ ಬಂದು ದೂರುಗಳನ್ನು ಕಲ್ಪಿಸಿಕೊಂಡು ಆಟದ ರಾಜನ ಎದುರು ಹೇಳಿಕೊಂಡರು. ಸಾಕ್ಷಿಗಳನ್ನೂ ಕರೆದದ್ದಾಯಿತು. ಆಗ ಆಟದ ರಾಜ ಎಲ್ಲ ಸಂಗತಿಗಳನ್ನು ಕೇಳಿ ಅವುಗಳನ್ನು ತೂಗಿ ತನ್ನ ತೀರ್ಪನ್ನು ಕೊಟ್ಟನು.

ಹುಡುಗರಿಗೆ ಈ ಆಟ ತುಂಬ ಹಿಡಿಸಿತು. ಇದೇ ಅವರ ಅತ್ಯಂತ ಪ್ರಿಯವಾದ ಆಟವಾಯಿತು. ಪ್ರತಿ ದಿನವೂ ನ್ಯಾಯಾಲಯದ ಈ ಆಟವನ್ನು ಅವರು ಆಡತೊಡಗಿದರು. ದೂರುಗಳನ್ನು ಕೇಳುವುದು, ತಪ್ಪಿತಸ್ಥರನ್ನು ಎದುರು ನಿಲ್ಲಿಸುವುದು, ಎರಡು ಕಡೆಯ ಕಾರಣಗಳನ್ನು ಜಾಗರೂಕತೆಯಿಂದ ತೂಗಿ ನೋಡಿ ಕಲ್ಲಿನ ಮೇಲೆ ಕೂತಿದ್ದ ಹುಡುಗ ತೀರ್ಪು ಕೊಡುವುದು—ಹೀಗೆ ಪ್ರತಿದಿನವೂ ಆಟ ನಡೆಯುತ್ತಿತ್ತು.

ಈ ಹುಡುಗನ ನ್ಯಾಯವಿಚಾರಣೆಯ ಕ್ರಮ, ತೀರ್ಪುಕೊಡುವ ಶಕ್ತಿಯ ಸುದ್ದಿ ಊರಲ್ಲೆಲ್ಲ ಕೂಡಲೇ ಹರಡಿತು. ಆ ಹುಡುಗನಿಗೆ ದೈವಿಕಶಕ್ತಿಯಿರಬೇಕೆಂದು ಒಬ್ಬರಿಗೊಬ್ಬರು ಆಡಿ ಕೊಂಡರು.

ಮೂರನೆಯ ದಿನ ಒಂದು ಭೂಮಿಯ ವಿಷಯದಲ್ಲಿ ಇಬ್ಬರು ರೈತರ ನಡುವೆ ಜಗಳವಾಯಿತು. ಅವರು ರಾಜನ ಹತ್ತಿರ ನ್ಯಾಯಕ್ಕಾಗಿ ಹೋಗುವ ಬದಲು, ಹುಡುಗರು ಆಡುತ್ತಿದ್ದ ಗುಡ್ಡಕ್ಕೆ ಬಂದು ಹುಡುಗನ ಎದುರು ತಮ್ಮ ದೂರನಿಟ್ಟರು. ಹುಡುಗ ಅವರಿಬ್ಬರ ಜಗಳವನ್ನು ಮೌನ ದಿಂದ ಕೇಳಿ ತನ್ನ ತೀರ್ಮಾನವನ್ನು ಕೊಟ್ಟನು. ಎಲ್ಲರೂ ಈ ಹುಡುಗನ ತಿಳುವಳಿಕೆ ಮತ್ತು ನ್ಯಾಯಪಕ್ಷಪಾತವನ್ನು ಕಂಡು ಬೆರಗಾದರು.

ಆ ದಿನದಿಂದ ಪಟ್ಟಣದ ಪ್ರತಿಯೊಬ್ಬನೂ ರಾಜನ ಹತ್ತಿರ ತೀರ್ಪಿಗಾಗಿ ಹೋಗುವುದರ ಬದಲು ಈ ಹುಡುಗನ ಹತ್ತಿರವೇ ತಮ್ಮ ದೂರುಗಳನ್ನು ತಂದರು. ಪ್ರತಿ ಬಾರಿಯೂ ಅವರು ಈ ಹುಡುಗನ ತೀರ್ಪಿನಿಂದ ತೃಪ್ತರಾಗಿ ಹೋಗುತ್ತಿದ್ದರು.

ಬಹುಬೇಗನೆ ಈ ಸುದ್ದಿ ರಾಜನ ಕಿವಿಯನ್ನು ಸೇರಿತು. ಅವನಿಗೆ ಕೋಪ ಮತ್ತು ಆಶ್ಚರ್ಯ ಎರಡೂ ಆಯಿತು. ತನಗಿಂತ ಉತ್ತಮ ತೀರ್ಪುಗಳನ್ನು ಕೊಡಬಲ್ಲ ಈ ಚೋಟು ಹುಡುಗ ಯಾರೆಂದು ಅವನು ರೇಗಿ ಹೇಳಿದನು: "ನಾನು ಈ ಕಥೆಗಳನ್ನು ನಂಬಲಾರೆ. ನಾನೇ ಸ್ವತಃ ಹೋಗಿ ನೋಡಿ ಬರುತ್ತೇನೆ."

ಹೀಗೆ ಹೇಳಿ ರಾಜ ತನ್ನ ಅಂಗರಕ್ಷಕರನ್ನೂ ಆಸ್ಥಾನದವರನ್ನೂ ಕರೆದುಕೊಂಡು ಗುಡ್ಡದ ಬಳಿ ಹೋದನು. ಹುಡುಗರ ಆಟವನ್ನು ಸ್ವಲ್ಪ ಹೊತ್ತು ಗಮನಿಸಿದ ಬಳಿಕ ರಾಜನಿಗೂ ಅತ್ಯಂತ ಆಶ್ಚರ್ಯವಾಯಿತು.

ತನ್ನ ಮಂತ್ರಿಗಳ ಕಡೆ ತಿರುಗಿ ರಾಜ ಹೀಗೆ ಹೇಳಿದನು: "ಇವನು ಖಂಡಿತ ತುಂಬ ತಿಳುವಳಿಕೆ ಯುಳ್ಳ ಹುಡುಗ. ಇಷ್ಟು ಚಿಕ್ಕ ವಯಸ್ಸಿನ ಹುಡುಗನಲ್ಲಿ ಇಷ್ಟು ಬುದ್ಧಿವಂತಿಕೆಯಿರುತ್ತ ದೆಂದು ನಾನು ಎಂದೂ ತಿಳಿದಿರಲಿಲ್ಲ. ಎಂತಹ ಪಂಡಿತರಿಗೂ ಇವನನ್ನು ನೋಡಿ ನಾಚಿಕೆ ಯಾಗಬೇಕು."

"ಆದರೆ ನಿತ್ಯ ತೀರ್ಪುಕೊಡುವ ಹುಡುಗ ಇವನಲ್ಲ. ಅವನಿಗೆ ಹುಶಾರಿಲ್ಲದಿದ್ದರಿಂದ ಇನ್ನೊಬ್ಬ ಹುಡುಗ ಇವತ್ತು ಕಲ್ಲಿನ ಬೆಂಚಿನ ಮೇಲೆ ಕೂತಿದ್ದಾನೆ" ಎಂದು ಮಂತ್ರಿಗಳಲ್ಲೊಬ್ಬ ರಾಜನಿಗೆ ಉತ್ತರಿಸಿದ.

ರಾಜ ಉದ್ಗರಿಸಿದ: "ಇದು ಅತ್ಯಂತ ಆಶ್ಚರ್ಯದ ವಿಷಯವೇ ಸರಿ. ಕಲ್ಲಿನ ಚಪ್ಪಡಿಯನ್ನು ನಾನು ನೋಡಬೇಕು. ಆ ಕಲ್ಲಿನಲ್ಲಿ ಮಾಂತ್ರಿಕ ಶಕ್ತಿಯಿರಬಹುದು."

ರಾಜಾಜ್ಞೆಯ ಮೇರೆಗೆ ಆ ಕಲ್ಲಿನ ಚಪ್ಪಡಿಯನ್ನು ಅಗೆದು ತೆಗೆದದ್ದಾಯಿತು. ನೋಡಿದರೆ ಅದೊಂದು ಕಲ್ಲಿನಲ್ಲಿ ಸುಂದರವಾಗಿ ಕೊರೆದಿದ್ದ ಸಿಂಹಾಸನ. ಅದರ ನಾಲ್ಕು ಕಾಲುಗಳ ಮೇಲೂ ನಾಲ್ಕು ದೇವತೆಗಳನ್ನು ಕೊರೆಯಲಾಗಿತ್ತು. ಆ ಸಿಂಹಾಸನ ನೂರಾರು ವರ್ಷಗಳ ಹಿಂದಿನ ಕಾಲದ್ದೆಂದೂ, ವಿಕ್ರಮಾದಿತ್ಯ ಎನ್ನುವ ರಾಜ ಅದರ ಮೇಲೆ ಕೂತಿದ್ದನೆಂದೂ, ಈ ರಾಜ ತನ್ನ ವಿದ್ಯೆಗೆ, ನ್ಯಾಯಪಕ್ಷಪಾತತನಕ್ಕೆ ಅತ್ಯಂತ ಹೆಸರಾದ ವ್ಯಕ್ತಿಯೆಂದೂ ಒಬ್ಬ ವಿದ್ವಾಂಸನು ಆ ಸಿಂಹಾಸನವನ್ನು ನೋಡಿ ತೀರ್ಮಾನಿಸಿದನು.

ಈ ಸಿಂಹಾಸನವನ್ನು ತನ್ನ ಅರಮನೆಗೆ ಕೊಂಡೊಯ್ದು ಅಲ್ಲಿ ಅದನ್ನು ಸ್ಥಾಪಿಸಬೇಕೆಂದು ರಾಜನು ಅಪ್ಪಣೆಕೊಟ್ಟನು. ನ್ಯಾಯ ತೀರ್ಮಾನ ಮಾಡಬೇಕಾದಾಗ ತಾನು ಅದರ ಮೇಲೆ ಕೂತು ತೀರ್ಪು ಕೊಡುತ್ತೇನೆಂದು ರಾಜನು ನಿಶ್ಚಯಿಸಿದನು.

ಮೂರನೆಯ ದಿನ ತುಂಬಿದ ಸಭೆಗೆ ರಾಜ ಬಂದನು. ಕಲ್ಲಿನ ಸಿಂಹಾಸನದ ಹತ್ತಿರ ನೇರವಾಗಿ ಹೋದನು. ಇನ್ನೇನು ಅವನು ಅದರ ಮೇಲೆ ಹೋಗಿ ಕೂರಬೇಕು, ಆಗ ಅವನಿಗೊಂದು ಅಧಿಕಾರಯುತವಾದ ವಾಣಿ ಕೇಳಿಸಿತು." "ಸ್ವಲ್ಪ ತಾಳು."

ರಾಜ ನಿಂತು ತನ್ನ ಸುತ್ತಲೂ ನೋಡಿದನು. ಅವನಿಗೆ ಯಾರೂ ಕಾಣಿಸಲಿಲ್ಲ. ಎಚ್ಚರಿಕೆಯಿಂದ ಅವನು ಮತ್ತೊಮ್ಮೆ ನೋಡಿದನು. ಸಿಂಹಾಸನದ ಕಾಲೊಂದರ ಮೇಲೆ ಕೊರೆದಿದ್ದ ದೇವತೆಯ ವಾಣಿ ಅದು ಎಂದು ಅವನಿಗೆ ಗೊತ್ತಾಯಿತು.

ದೇವತೆ ಮಾತಾನಾಡಿದಳು. "ಈ ಸಿಂಹಾಸನದ ಮೇಲೆ ಕೂರಲು ನೀನು ಅರ್ಹನೆಂದು ತಿಳಿದಿದ್ದೀಯ? ನೀನು ಯಾವತ್ತು, ಏನನ್ನೂ, ಕದ್ದಿಲ್ಲವೆ—ಯೋಚಿಸಿ ನೋಡು."

ರಾಜ ಅವಮಾನದಿಂದ ತಲೆ ತಗ್ಗಿಸಿದ. "ನನ್ನ ಸಭಿಕರಲ್ಲಿ ಒಬ್ಬನಿಗೆ ಸೇರಿದ್ದ ಭೂಮಿಯನ್ನು ನಾನು ನನ್ನ ಪಾಲಿಗೆ ತೆಗೆದುಕೊಂಡೆ—ಅವನಿಗೂ ನನಗೂ ಆಗದಿದ್ದ ಕಾರಣದಿಂದ" ಎಂದು ಅವನು ಒಪ್ಪಿಕೊಂಡನು.

ಅದಕ್ಕೆ ದೇವತೆ ಉತ್ತರಿಸಿದಳು. "ಹಾಗಾದರೆ ನೀನು ಅನರ್ಹ. ಮೂರು ದಿನ ನೀನು ಇದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು." ಎಂದು ಹೇಳಿ ದೇವತೆ ತನ್ನ ರೆಕ್ಕೆಗಳನ್ನು ಬಿಚ್ಚಿ ಹಾರಿ ಹೋದಳು.

ರಾಜ ಮೂರು ದಿನ ಉಪವಾಸ ಮಾಡಿ ಪ್ರಾರ್ಥಿಸಿದ. ನಾಲ್ಕನೆಯ ದಿನ ಮತ್ತೆ ಸಿಂಹಾಸನದ ಹತ್ತಿರಕ್ಕೆ ಬಂದ. ಅವನು ತಿರುಗಿ ಕೂರುವಷ್ಟರಲ್ಲೇ ಎರಡನೆಯ ದೇವತೆ ಮಾತನಾಡಿದಳು. "ಸ್ವಲ್ಪ ತಾಳು, ನೀನು ಎಂದೂ ಸುಳ್ಳು ಹೇಳಿದಿಲ್ಲವೆ?"

ರಾಜ ಅನುಮಾನಿಸಿದ. ಎಷ್ಟೋ ಸಂದಿಗ್ಧ ಪರಿಸ್ಥಿತಿಗಳಲ್ಲಿ ಅವನು ಅವುಗಳಿಂದ ಪಾರಾಗಲು ಸುಳ್ಳುಗಳನ್ನು ಹೇಳಿದ್ದ! ಆದ್ದರಿಂದ ರಾಜ ತನ್ನ ಹೆಜ್ಜೆಯನ್ನು ಹಿಂದಕ್ಕೆ ಹಾಕಿದ. ಎರಡನೆ ಕಲ್ಲಿನ ದೇವತೆಯೂ ತನ್ನ ರೆಕ್ಕೆಗಳನ್ನು ಬಿಚ್ಚಿ ಹಾರಿ ಹೋದಳು.

ಮತ್ತೆ ಮೂರು ದಿನ ಉಪವಾಸ. ಜಪಗಳನ್ನು ಮಾಡಿ ರಾಜ ತನ್ನ ಸಭೆಗೆ ಹೋದನು. ಈ ಸಾರಿ ಅನುಮಾನಿಸುತ್ತ ಸಿಂಹಾಸನದ ಹತ್ತಿರಕ್ಕೆ ಹೋದನು. ಇನ್ನೇನು ಅವನು ಅದರ ಮೇಲೆ ಕೂರಬೇಕು. ಆಗ ಮೂರನೇ ದೇವತೆ ಕೇಳಿದಳು: "ಯಾರಿಗೂ ನೀನು ಅನ್ಯಾಯವನ್ನೂ ನೋವನ್ನೂ ಉಂಟುಮಾಡಿಲ್ಲವೆ?"

ರಾಜ ಮರುಮಾತಾಡದೆ ಹಿಂದೆಗೆದ. ಮೂರನೇ ಕಲ್ಲಿನ ದೇವತೆ ರೆಕ್ಕೆಗಳನ್ನು ಬಿಚ್ಚಿ ಹಾರಿ ಹೋದಳು.

ಮತ್ತೆ ಮೂರು ದಿನ ಉಪವಾಸ, ಜಪಗಳನ್ನು ಮಾಡಿ ಅವನು ತನ್ನ ಸಭೆಗೆ ಬಂದನು. ಈ ಬಾರಿ ಸಿಂಹಾಸನದ ಹತ್ತಿರಕ್ಕೆ ಹೋಗುತ್ತಿದ್ದಂತೆ ಅವನ ಕಾಲುಗಳು ನಡುಗಿದವು.

ಆಗ ನಾಲ್ಕನೆಯ ದೇವತೆ ಮಾತನಾಡಿದಳು. "ಈ ಸಿಂಹಾಸನದ ಮೇಲೆ ಕೂತು ಆಟವಾಡಿದ ಹುಡುಗರು ಮುಗ್ಧರು. ಕೇಡು ತಿಳಿಯದವರು. ಈ ದೇಶದಲ್ಲೆಲ್ಲ ನೀನು ಅತ್ಯಂತ ನ್ಯಾಯವಂತ ಮನುಷ್ಯನೆಂಬ ಧೈರ್ಯವಿದ್ದರೆ ಸಿಂಹಾಸನವನ್ನು ಹತ್ತಬಹುದು."

ರಾಜ ಬಹಳ ಹೊತ್ತು ಅನುಮಾನಿಸಿದನು. ಆ ಮೇಲೆ ಹೀಗೆ ಅಂದುಕೊಂಡನು: "ಒಂದು ಮಗು ಈ ಸಿಂಹಾಸನದ ಮೇಲೆ ಕೂರಬಲ್ಲುದಾದರೆ ನಾನು ಯಾಕೆ ಕೂರಕೂಡದು? ನಾನು ರಾಜ. ಆದ್ದರಿಂದ ನನ್ನಷ್ಟು ಶ್ರೀಮಂತರು, ಬುದ್ಧಿವಂತರು. ಉತ್ತಮರು, ನ್ಯಾಯ ಪಕ್ಷಪಾತಿಗಳು ಇನ್ನು ಯಾರೂ ಇರಲಾರರು. ನಾನು ಈ ಸಿಂಹಾಸನದ ಮೇಲೆ ಕೂತೇ ತೀರಬೇಕು."

ಹೀಗೆ ಅಂದುಕೊಂಡು ರಾಜ ಗಟ್ಟಿ ಮನಸ್ಸುಮಾಡಿ ಸಿಂಹಾಸನದ ಮೇಲೆ ಕೂರಲು ಹೋದನು. ಆಗ ನಾಲ್ಕನೆಯ ದೇವತೆ ತನ್ನ ರೆಕ್ಕೆಗಳನ್ನು ಬಿಚ್ಚಿ ಸಿಂಹಾಸನದ ಸಹಿತವಾಗಿ ಹಾರಿ ಹೋದಳು.

# ಜಾಣ ಹೆಂಡತಿ

ಪುರಾತನ ಪಟ್ಟಣ ದಿಲ್ಲಿಯಲ್ಲಿ ಬಹಳ ಕಾಲದ ಹಿಂದೆ ಚೋಟುಲಾಲ್ ಎಂಬ ತರುಣ ವೈದ್ಯನಿದ್ದ. ನಂದಿನಿ ಅವನ ಸುಂದರಳಾದ ಹೆಂಡತಿ. ಅನ್ಯಮನಸ್ಕನಾದ ಚೋಟುಲಾಲ್ ಅಸಾಧ್ಯ ಮರೆವಿನ ವ್ಯಕ್ತಿಯೆಂದು ಪ್ರಸಿದ್ಧನಾಗಿದ್ದ. ಅದೆಷ್ಟೋ ಪ್ರಯತ್ನಪಟ್ಟರೂ ಆ ಬಡಪಾಯಿ ತನ್ನ ರೋಗಿಗಳಿಗೆ ಔಷಧಿ ಕೊಡುವಲ್ಲಿ ಇಲ್ಲವೆ ಸಲಹೆ ನೀಡುವಲ್ಲಿ ಮರೆವಿನಿಂದ ತಪ್ಪುಮಾಡಿಬಿಡುತ್ತಿದ್ದ. ಬಹಳ ವರ್ಷಗಳ ಕಾಲ—ಹಾವು ಕಚ್ಚಿದ ಮನುಷ್ಯನಿಗೆ ಕೆಮ್ಮಲು ಔಷಧಿಯನ್ನು ಕೊಟ್ಟೋ ಇಲ್ಲವೆ ಕಾಲುಳುಕಿ ಬಂದ ಹೆಂಗಸಿಗೆ ತಲೆನೋವಿನ ಔಷಧಿ ಕೊಟ್ಟೋ ಇವನ ಮರೆವಿನ ಅನರ್ಥಗಳು ಮುಂದುವರಿದಿದ್ದುವು.

ಒಂದು ದಿನ ಬಿಸಿಲ ತಾಪದಿಂದಾಗಿ ಮೂರ್ಛೆಹೋದ ರೈತನೊಬ್ಬನನ್ನು ಚೋಟುಲಾಲ್‌ನಲ್ಲಿಗೆ ಚಿಕಿತ್ಸೆಗೆಂದು ತಂದರು. ಅದೇ ಸಮಯಕ್ಕೆ ಸರಿಯಾಗಿ ಮರಬಿದ್ದು ತೋಳು ಜಜ್ಜಿಹೋಗಿದ್ದ ಮುದುಕಿಯೂ ಬಂದಿದ್ದಳು. ಸರಿ, ತನ್ನ ಮಾಮೂಲು ಮರೆವಿನಿಂದ ಚೋಟುಲಾಲ್ ರೈತನ ತೋಳನ್ನೇ ಕತ್ತರಿಸಿ ಹಾಕಿ, ಪಾಪ ಆ ಮುದುಕಿಗೆ ಬಿಸಿಲ ತಾಪದ ಮೂರ್ಛೆಗೆಂದು ತಯಾರಿಸಿಟ್ಟಿದ್ದ ಗುಳಿಗೆಗಳನ್ನು ಕೊಟ್ಟುಬಿಟ್ಟ. ತಕ್ಷಣವೇ ಜನರು ಚೋಟುಲಾಲ್‌ನ ಹತ್ತಿರ ಚಿಕಿತ್ಸೆಗಾಗಲಿ, ಔಷಧಿಗಾಗಲಿ ಬರುವುದನ್ನು ಬಿಟ್ಟುಬಿಟ್ಟರು. ಇದರಿಂದಾಗಿ ಅವನು ದಿನದಿನಕ್ಕೂ ಬಡವನಾಗುತ್ತ ತನ್ನ ಹೆಂಡತಿಗೆ ಚಿನ್ನದ ಸರವನ್ನಾಗಲಿ ಇಲ್ಲವೆ ಒಳ್ಳೆಯ ಸೀರೆಯನ್ನಾಗಲಿ ಕೊಂಡುಕೊಡಲು ಅಸಮರ್ಥನಾದ. ಇದರಿಂದಾಗಿ ನಂದಿನಿ ಸಿಡುಕಿನಿಂದ ಅತೃಪ್ತಿಯಿಂದ ಅವನನ್ನು ಒಂದೇ ಸಮನೆ ಪೀಡಿಸತೊಡಗಿದಳು.

ಒಂದು ಸಂಜೆ ಚೋಟುಲಾಲ್ ಒಂದೇ ಒಂದು ಪೈಸೆಯೂ ಇಲ್ಲದೆ ಮನೆಗೆ ಮರಳಿದ.

ಮುಂಜಾನೆಯೇ ಮನೆ ಬಿಟ್ಟು ದಿನವೆಲ್ಲ ಕಾದಿದ್ದು ವ್ಯರ್ಥವಾಯಿತು. ಏಕೆಂದರೆ ಒಬ್ಬನಾದರೂ ಅವನ ಔಷಧಾಲಯಕ್ಕೆ ಬರಲೇ ಇಲ್ಲ.

ನಂದಿನಿ ರೇಗಿ ಕೂಗಾಡಿದಳು. "ಇಂಥಾ ಗಂಡನನ್ನು ಪಡೆಯಲು ನಾನು ಏನು ಪಾಪ ಮಾಡಿದ್ದೆನೊ, ಗಂಡನಾದವನು ತನ್ನ ಹೆಂಡತಿಯನ್ನು ಸಾಕಬೇಕು. ನಿನ್ನೆ ರಾತ್ರಿಯೇ ಕೊನೆಯದಾಗಿ ಉಳಿದಿದ್ದ ಒಣಕು ಚಪಾತಿ ಪಲ್ಯ ಕೂಡ ಮುಗಿದು ಹೋಯಿತು. ಮನೆಯಲ್ಲಿ ತಿನ್ನಲು ಒಂದು ಚೂರೂ ಏನೂ ಇಲ್ಲ. ಇನ್ನು ಉಳಿದಿರುವುದು ಒಂದೇ—ನಾವು ಹೋಗಿ ಭಿಕ್ಷೆ ಮಾಡುವುದು." ಎಂದು ಜೋರಾಗಿ ಅತ್ತು, ಕರೆಯುತ್ತ ಬಾಗಿಲನ್ನು ಧಡೀರನೆ ನೂಕಿದಳು.

ಚೋಟುಲಾಲ್ ಅವಮಾನದಿಂದ ತಲೆತಗ್ಗಿಸಿದ. ಕಷ್ಟಪಟ್ಟು ಕಾಲೆಳೆಯುತ್ತ, ಹಜಾರದ ಕಡೆ ನೋಡುತ್ತ, ಸಂಕೋಚದಿಂದ ಅವನು "ನಿನ್ನ ದಮ್ಮಯ್ಯ ನಂದಿನಿ, ಕೋಪಿಸಿಕೊಳ್ಳಬೇಡ. ನಿನಗೆ ಸಂತೋಷ ಆಗುವುದಾದರೆ ನಾನು ಭಿಕ್ಷೆ ಬೇಡುತ್ತೇನೆ. ಆದರೆ ಎಲ್ಲಿ ಹೋಗಬೇಕು ಅಂತ ಮಾತ್ರ ಹೇಳು" ಅಂದನು.

ನಂದಿನಿ ಕಣ್ಣೀರನ್ನು ಒರೆಸಿಕೊಳ್ಳುತ್ತ ನಸುನಕ್ಕು "ರಾಜನ ಹತ್ತಿರ ಹೋಗು. ಅವನನ್ನು ಏನಾದರೂ ಬೇಡು. ಅವನು ತುಂಬಾ ಸಂತೋಷದ ಮನಸ್ಥಿತಿಯಲ್ಲಿದ್ದರೆ ನೀನು ಬೇಡಿದ್ದನ್ನೆಲ್ಲ ನೀಡಬಹುದು" ಎಂದಳು.

ಸರಿ, ಚೋಟುಲಾಲ್ ಅರಮನೆಯತ್ತ ಹೊರಟ. ಅಲ್ಲಿ ಹೊಳೆಯುವ ಆಯುಧಗಳನ್ನು ಹಿಡಿದು, ಚಿನ್ನದ ಕುಸುರಿ ಮಾಡಿದ ಸಮವಸ್ತ್ರ ಧರಿಸಿ ಭಯವನ್ನುಂಟುಮಾಡುವ ಹಾಗೆ ನೋಡುತ್ತ ನೀಲಗಿರಿ ಮರಗಳಂತೆ ನೆಟ್ಟಗೆ ನಿಂತಿದ್ದ ರಕ್ಷಕರನ್ನು ಧೈರ್ಯವಾಗಿ ದಾಟಿ ಒಳಗೆ ನಡೆದ. ರಾಜ ತನ್ನ ರತ್ನಖಚಿತ ಸಿಂಹಾಸನದ ಮೇಲೆ ಕುಳಿತಿದ್ದ. ಅವನ ಅಕ್ಕಪಕ್ಕದಲ್ಲಿ ಮಂತ್ರಿಗಳು ಮತ್ತು ರಾಜಸಭಿಕರು ನೆರೆದಿದ್ದರು.

ಚೋಟುಲಾಲ್ ರಾಜನ ಮುಂದೆ ಬಗ್ಗಿಬಗ್ಗಿ ಮೂರುಸಲ ನಮಸ್ಕರಿಸಿದ. ಅನಂತರ ಧೈರ್ಯ ತಂದುಕೊಂಡು ಕೈ ಜೋಡಿಸಿ, "ಮಹಾಪ್ರಭು, ಏನಾದರೂ ನನಗೆ ನೀಡಿ." ಎಂದು ಬೇಡಿದ.

ರಾಜ ವಿನೋದದಿಂದ ನಸುನಗುತ್ತ "ಖಚಿತವಾಗಿ ನಿನಗೆ ಏನು ಬೇಕೆಂದು ಕೇಳು" ಎಂದು ಕೇಳಿದ.

ಚೋಟುಲಾಲ್‌ನಿಗೆ ದಿಕ್ಕೇ ತೋರದಂತಾಯಿತು. ಅವನ ಹೆಂಡತಿ ಏನನ್ನು ಬೇಡಬೇಕೆಂಬು

ವನ್ನೇ ಹೇಳಿರಲಿಲ್ಲ. "ಏನನ್ನಾದರೂ ಬೇಡಿಕೊ" ಎಂದಷ್ಟು ಮಾತ್ರ ಹೇಳಿದ್ದಳು. ಸರಿ ಏನೂ ತೋಚದ ಚೋಟುಲಾಲ್ "ಏನನ್ನಾದರೂ ಸರಿಯೆ ಮಹಾಪ್ರಭು" ಎಂದ.

ರಾಜ ತನ್ನ ಮಂತ್ರಿಯ ಕಡೆಗೆ ತಿರುಗಿ "ಬೇರೆ ಯಾರಿಗೂ ಬೇಕಾಗದ ಜಮೀನನ್ನು ಇವನಿಗೆ ಕೊಡಿಸು" ಎಂದು ಆಜ್ಞೆ ಮಾಡಿದ.

ಚೋಟುಲಾಲ್ ದಾರಿಯುದ್ದಕ್ಕೂ ಸಂತೋಷದಿಂದ ಹಾಡುತ್ತ ಮನೆಗೆ ಧಾವಿಸಿ ಬಂದವನೆ ತನ್ನ ಹೆಂಡತಿಗೆ ಹೇಳಿದ. "ನೋಡು, ರಾಜ ಎಷ್ಟು ಕರುಣಾಳು. ನನ್ನ ಬೇಡಿಕೆಯನ್ನು ದಯಪಾಲಿಸಿಯೇ ಬಿಟ್ಟ. ಬೇರೆ ಯಾರಿಗೂ ಬೇಕಾಗದಿರುವ ಜಮೀನನ್ನೇ ನನಗೆ ಕೊಟ್ಟಿದ್ದಾನೆ."

ನಂದಿನಿಗೆ ತುಂಬಾ ನಿರಾಶೆಯಾಗಿ ಸಿಡುಕಿನಿಂದ ತನ್ನ ಕೂದಲನ್ನು ಕಿತ್ತುಕೊಂಡಳು. ಆದರೆ ಅವಳೇನು ಮಾಡಿಯಾಳು? ಅವಳ ಕೋಪ ತಣ್ಣಗಾದ ಮೇಲೆ ಅವಳು ಚೋಟುಲಾಲ್‌ನನ್ನು ಕರೆದುಕೊಂಡು ಆ ಜಮೀನನ್ನು ನೋಡಲು ಹೋದಳು. ಅದು ತುಂಬಾ ದೊಡ್ಡದಾಗಿತ್ತು. ಆದರೆ ಅದರ ತುಂಬೆಲ್ಲ ಮೆಳೆಗಳು ಪೊದೆಗಳು ಹೇರಳವಾಗಿ ಬೆಳೆದು ಅಸಂಖ್ಯಾತ ಕಲ್ಲುಗುಂಡು ಹರಡಿದ್ದವು.

ನಂದಿನಿಗೆ ತುಂಬಾ ನಿರಾಶೆಯಾಯಿತು. ಹೇಗೆ ಇವನ್ನೆಲ್ಲ ತೆಗೆದು ಈ ಜಮೀನನ್ನು ಉಳುವುದಕ್ಕೆ ಮತ್ತು ಬಿತ್ತುವುದಕ್ಕೆ ಆಗುವಂತೆ ಮಾಡುವುದು? ಆದರೆ ನಂದಿನಿ ತನ್ನ ಕೈಯಲ್ಲಿ ಆಗುವುದಿಲ್ಲವೆಂದು ಯಾವೊತ್ತೂ ಕೂತವಳಲ್ಲ. ತನ್ನ ಗಂಡನ ಕಡೆಗೆ ತಿರುಗಿ ತಾನು ಮಾಡಿದ್ದನ್ನೆಲ್ಲ ಮರುಮಾತಾಡದೆ ಅನುಸರಿಸಬೇಕೆಂದು ಹೇಳಿದಳು. ಅನಂತರ ಬಗ್ಗಿ ನೆಲವನ್ನು ಪರೀಕ್ಷಿಸುವ ಹಾಗೆ ಇಣುಕಿ ನೋಡತೊಡಗಿದಳು. ಚೋಟುಲಾಲ್ ಅವಳನ್ನ ಅನುಸರಿಸಿದ. ಅವರಿಬ್ಬರೂ ಬಗ್ಗಿ ಕಣ್ಣುಗಳನ್ನು ನೆಲದಲ್ಲೆ ನೆಟ್ಟು ನಿಧಾನವಾಗಿ ಜಮೀನಿನ ಮೇಲೆ ಕೆಳಗೆಲ್ಲ ತಿರುಗಾಡತೊಡಗಿದರು.

ಒಂದು ಕಳ್ಳರ ಗುಂಪು ಅಲ್ಲಿಗೆ ಧಾವಿಸುತ್ತ ಬಂತು. ಚೋಟುಲಾಲ್ ಮತ್ತು ಅವನ ಹೆಂಡತಿ ನೆಲವನ್ನು ಕುತೂಹಲದಿಂದ ಹುಡುಕುತ್ತಿದ್ದುದು ಕಂಡು ಕಳ್ಳರ ನಾಯಕ ಕುದುರೆಯಿಂದ ಇಳಿದವನೆ "ನೀವು ಏನನ್ನು ಹುಡುಕುತ್ತಿದ್ದೀರಿ? ಏನನ್ನಾದರೂ ಕಳೆದುಕೊಂಡಿದ್ದೀರೇನು?" ಎಂದು ಕೇಳಿದ.

ನಂದಿನಿ ಬೆರಗುಗೊಂಡಂತೆ ನಿಂತಳು, "ಇಲ್ಲ ಇಲ್ಲ ನಾವು ಏನನ್ನೂ ಕಳೆದುಕೊಂಡಿಲ್ಲ" ಎಂದು ಬೇಗ ಬೇಗ ಮಾತಾಡಿ ಕಳ್ಳರ ಒಡೆಯನನ್ನು ಬೇರೆ ಕಡೆಗೆ ಕರೆದೊಯ್ಯಲು ಯತ್ನಿಸಿದಳು.

ಇದರಿಂದ ಕಳ್ಳರ ಒಡೆಯನಿಗೆ ಅನುಮಾನ ಹುಟ್ಟಿತು. ನಂದಿನಿ ಏನನ್ನು ಹುಡುಕುತ್ತಿದ್ದ ಳೆಂಬುದನ್ನು ತಾನು ಪತ್ತೆ ಹಚ್ಚಿಯೇ ತೀರುವೆನೆಂದು ಹಟತೊಟ್ಟ. ಅವಳನ್ನು ಸೂಕ್ಷ್ಮವಾಗಿ ಪ್ರಶ್ನಿಸಲು ಪ್ರಾರಂಭಿಸಿದ. ಕಡೆಗೆ ನಂದಿನಿ ಅವನನ್ನು ಒಂದು ಪಕ್ಕಕ್ಕೆ ಕರೆದು ಗುಟ್ಟಾಗಿ ಪಿಸು ಗುಟ್ಟಿದಳು "ನಾನು ನಿನಗೊಂದು ಗುಟ್ಟು ಹೇಳುವೆ. ನೀನು ಅದನ್ನು ಯಾರಿಗೂ ಹೇಳುವುದಿಲ್ಲ ವೆಂದು ವಚನ ಕೊಡಬೇಕು. ನನ್ನ ಅಜ್ಜ ನೆನ್ನೆ ತೀರಿಕೊಂಡರು. ಅವರು ಸಾಯುವ ಮೊದಲು ಇಲ್ಲಿ ಎಲ್ಲೋ ಚಿನ್ನದ ನಾಣ್ಯ ತುಂಬಿದ ಮೂರು ಕೊಪ್ಪರಿಗೆಗಳನ್ನು ಹೂತಿಟ್ಟಿದ್ದೇನೆಂದು ಹೇಳಿ ದ್ದರು. ಈಗ ನಾವು ಆ ಕೊಪ್ಪರಿಗೆಗಳನ್ನು ಹುಡುಕುತ್ತಿದ್ದೇವೆ. ದಯವಿಟ್ಟು ಇದನ್ನು ಯಾರಿಗೂ ಹೇಳಬಾರದು."

ತಾನು ಯಾರಿಗೂ ಹೇಳುವುದಿಲ್ಲವೆಂದು ವಚನಕೊಟ್ಟು ಕಳ್ಳರ ನಾಯಕ ಹೊರಟು ಹೋದ. ಚೋಟುಲಾಲ್ ಮತ್ತು ಅವನ ಹೆಂಡತಿ ತಾವೂ ಮನೆಗೆ ಹೊರಟರು. ದಾರಿಯುದ್ದಕ್ಕೂ ನಂದಿನಿ ನಗುತ್ತ ಹಾಡುತ್ತ ಮನೆ ಮುಟ್ಟಿದಳು. ಅವಳು ಅಷ್ಟು ಸಂತೋಷದಿಂದ ಇದ್ದುದ್ದನ್ನು ಕಂಡ ಚೋಟುಲಾಲ್‌ನಿಗೆ ಆಶ್ಚರ್ಯ.

ಮಾರನೆಯ ದಿನ ಚೋಟುಲಾಲ್ ಮತ್ತು ನಂದಿನಿ ತಮ್ಮ ಜಮೀನು ನೋಡಲು ಮತ್ತೆ ಬಂದರು. ಅವರ ಜಮೀನಿನ ಗುರುತೇ ಸಿಗದಷ್ಟು ಬದಲಾಗಿ ಬಿಟ್ಟಿತ್ತು. ನೆಲ ಅಗೆದು ಹದ ವಾಗಿತ್ತು. ಕಲ್ಲುಗುಂಡು ಕುರುಚಲು ಗಿಡ ಎಲ್ಲವನ್ನೂ ಕಿತ್ತು ಎತ್ತಿ ಹಾಕಲಾಗಿತ್ತು. ನಂದಿನಿ ಖುಷಿಯಿಂದ ಕೈಚಪ್ಪಾಳೆ ತಟ್ಟಿದಳು. "ನನ್ನ ಮೂರು ಕೊಪ್ಪರಿಗೆ ಚಿನ್ನದ ಕಥೆ ಆ ಜನರನ್ನು ಚೆನ್ನಾಗಿ ಮೋಸಮಾಡಿತು. ಚಿನ್ನ ಹುಡುಕುವ ಆಸೆಯಲ್ಲಿ ಅವರು ನಾವು ಮಾಡಬೇಕಾಗಿದ್ದ ಕಷ್ಟದ ಕೆಲಸ ತಾವೇ ಮಾಡಿ ಹೋಗಿದ್ದಾರೆ. ಈಗ ನಮಗೆ ಉಳಿದಿರುವ ಕೆಲಸವೆಂದರೆ ಗೋದಿ ಜೋಳದ ಬೀಜ ತಂದು ಬಿತ್ತುವುದೆಷ್ಟೋ ಅಷ್ಟೆ."

ನಂದಿನಿ ಶೆಟ್ಟಿಯೊಬ್ಬನ ಹತ್ತಿರ ಹಣ ಸಾಲ ಪಡೆದು ಬೀಜ ಕೊಂಡು ತಂದಳು. ದಂಪತಿ ಗಳಿಬ್ಬರೂ ಸೇರಿ ಅವುಗಳನ್ನು ಬಿತ್ತಿ ಗೊಬ್ಬರ ನೀರು ಹಾಕಿದರು. ಸ್ವಲ್ಪ ಕಾಲದ ನಂತರ ಸಮೃದ್ಧವಾದ ಪೈರನ್ನು ಪಡೆದರು. ಈಗ ಅವರು ತುಂಬಾ ಶ್ರೀಮಂತರು. ಅವರಿಗೆ ಊಟ ಮಾಡಲು ಸಾಕಷ್ಟು ಆಹಾರವಿತ್ತು. ಇರಲು ಒಳ್ಳೆಯ ಮನೆಯಿತ್ತು. ನಂದಿನಿಯನ್ನು ಪ್ರಸನ್ನ ಳನ್ನಾಗಿಡಲು ಸಾಕಷ್ಟು ಸುಂದರ ಸೀರೆಗಳು, ಚಿನ್ನದ ಸರಗಳು ಇದ್ದವು. ಕಳ್ಳರ ನಾಯಕನಿಗೆ ತನ್ನನ್ನು ಮೋಸಪಡಿಸಿದ್ದಕ್ಕಾಗಿ ತುಂಬಾ ಕೋಪ ಇತ್ತು. ಸೇಡು ತೀರಿಸಿಕೊಳ್ಳಲು ಅವನು ತಕ್ಕ ಅವಕಾಶಕ್ಕಾಗಿ ಕಾದಿದ್ದನು.

ಒಂದು ರಾತ್ರಿ ನಂದಿನಿ ಮತ್ತು ಚೋಟುಲಾಲ್ ಇನ್ನೇನು ಮಲಗಿಕೊಳ್ಳಬೇಕೆನ್ನುವಷ್ಟರಲ್ಲಿ ಕಳ್ಳರ ನಾಯಕ ಮನೆಯನ್ನು ಕದ್ದು ಹೊಕ್ಕಿ ಬಂದು ಪರದೆಯ ಹಿಂದೆ ಮರೆಯಾಗಿ ನಿಂತಿದ್ದ.

ಅವನ ನೆರಳು ಎದುರಿಗಿದ್ದ ಗೋಡೆಯ ಮೇಲೆ ಬಿದ್ದುದರಿಂದ ನಂದಿನಿಗೆ ಅವನ ಗುರುತು ಸಿಕ್ಕಿತು. ಅವಳು ಒಂದು ಮಡಿಕೆ ತುಂಬಾ ಒಡೆದ ಗಾಜಿನ ಚೂರುಗಳನ್ನು ತುಕ್ಕು ಹಿಡಿದಿದ್ದ ಮೊಳೆ ತುಂಡುಗಳನ್ನು ತುಂಬಿ ಅದರ ಮೇಲೆ ಬರ್ಫಿಯನ್ನು ಮುಚ್ಚಿದಳು. ಅನಂತರ ಅವಳು ತನ್ನ ಗಂಡನಿಗೆ ಗುಟ್ಟಾಗಿ ಇನ್ನೊಂದು ಐದು ನಿಮಿಷಗಳಲ್ಲಿ ತನ್ನನ್ನು ಕೂಗಿ ಕರೆಯಬೇಕೆಂದೂ, ಗಟ್ಟಿ ಸ್ವರದಲ್ಲಿ ತಾವು ಉಳಿಸಿದ ಹಣವನ್ನೆಲ್ಲ ಎಲ್ಲಿ ಮುಚ್ಚಿಟ್ಟಿದ್ದೀಯಾ ಎಂದು ಕೇಳಬೇಕೆಂದೂ ಹೇಳಿದಳು.

ಕೆಲವು ನಿಮಿಷಗಳ ನಂತರ ಚೋಟುಲಾಲ್ ಮಲಗುವ ಕೋಣೆಗೆ ಬಂದು ಗಟ್ಟಿಯಾಗಿ ಕೇಳಿದ "ನಮ್ಮ ಉಳಿತಾಯವನ್ನೆಲ್ಲ ನೀನು ಎಲ್ಲಿ ಮುಚ್ಚಿಟ್ಟಿದ್ದೀಯೆ? ಸರಿಯಾದ ಜಾಗದಲ್ಲಿ ಅವನ್ನೆಲ್ಲ ಬಚ್ಚಿಟ್ಟಿದ್ದೀ ತಾನೆ?"

ನಂದಿನಿ ಅದಕ್ಕೆ ಹೀಗೆ ಉತ್ತರಿಸಿದಳು. "ನೀವು ಈ ಬಗ್ಗೆ ಯೋಚಿಸುವುದೇನೂ ಬೇಡ. ನಾನು ಜಾಣೆ ಎಂಬುದು ನಿಮಗೆ ಗೊತ್ತಿಲ್ಲವೆ? ನಾವು ಉಳಿಸಿರುವುದೆಲ್ಲ ಜೋಪಾನವಾಗಿದೆ. ನಾನು ಅವನ್ನು ಮಡಿಕೆಯಲ್ಲಿ ತುಂಬಿ ಬರ್ಫಿಯಿಂದ ಅವನ್ನು ಮುಚ್ಚಿಟ್ಟಿದ್ದೇನೆ. ಯಾರಿಗೂ ಇದು ಪತ್ತೆಯಾಗದು" ಅನಂತರ ನಂದಿನಿ ದೀಪ ಆರಿಸಿ ಮಲಗಲು ಹೋದಳು.

ಪರದೆಯ ಹಿಂದೆ ಅವಿತಿದ್ದ ಕಳ್ಳರ ನಾಯಕ ತನ್ನೊಳಗೇ ನಕ್ಕನು. ನಂದಿನಿಗೆ ತಾನು ತಕ್ಕ ಶಾಸ್ತಿ ಮಾಡುತ್ತೇನೆ ಎಂದುಕೊಂಡನು. ಅವನು ಇಪ್ಪತ್ತು ನಿಮಿಷಗಳ ತನಕ ಕಾದನು. ನಂದಿನಿ ದೀರ್ಘವಾಗಿ ಉಸಿರಾಡುವುದು, ಚೋಟುಲಾಲ್ ಗೊರಕೆ ಹೊಡೆಯುವುದು ಅವನಿಗೆ ಕೇಳಿಸಿತು. ಅವರಿಬ್ಬರು ನಿದ್ದೆಮಾಡುತ್ತಿದ್ದಾರೆಂಬುದು ಖಚಿತವಾದ ಮೇಲೆ ಅವನು ಅಡಿಗೆಯ ಮನೆಗೆ ಮೆಲ್ಲಗೆ ತೆವಳಿದನು. ಅಲ್ಲಿ ಬರ್ಫಿ ತುಂಬಿಟ್ಟ ಮಡಿಕೆ ಎತ್ತಿಕೊಂಡು ಮನೆಯಿಂದ ಹೊರಟನು.

ಅವನು ತನ್ನ ಸಂಗಡಿಗರಿದ್ದಲ್ಲಿಗೆ ಓಡಿ ಹೋಗಿ ಮಡಿಕೆ ತೋರಿಸುತ್ತ, ಈ ಬರ್ಫಿ ಕೆಳಗೆ ಚೋಟುಲಾಲ್ ಮತ್ತು ನಂದಿನಿಯರ ಎಲ್ಲ ಉಳಿತಾಯವೂ ಇದೆಯೆಂದು ತಿಳಿಸಿದನು. ಹಣ ಮತ್ತು ಆಭರಣಗಳನ್ನು ದೋಚುವ ಆತುರದಲ್ಲಿ ಕಳ್ಳರು ಬರ್ಫಿಯನ್ನು ಎತ್ತಿ ಎಸೆದು ಮಡಿಕೆಯೊಳಕ್ಕೆ ಕೈಹಾಕಿದರು. ಆದರೆ ಅವರ ಕೈಗಳಿಗೆ ಸಿಕ್ಕಿದ್ದೆಂದರೆ ಅವರ ಕೈಗಳನ್ನೆ ಗಾಯ ಮಾಡಿದ ಗಾಜಿನ ಚೂರುಗಳು ಮತ್ತು ಕೈಗೆ ಚುಚ್ಚಿಕೊಂಡ ತುಕ್ಕು ಹಿಡಿದ ಮೊಳೆ ತುಂಡುಗಳು ಮಾತ್ರ. ನೆಲದ ಮೇಲೆ ಬರ್ಫಿಯನ್ನು ಎಸೆದು ಬಿಟ್ಟಿದ್ದರಿಂದ ಅದು ಕೆಸರಾಗಿ ಅವನ್ನೂ ತಿನ್ನಲಾಗಲಿಲ್ಲ. ಕೈಗಳು ರಕ್ತಮಯವಾಗಿಬಿಟ್ಟವು. ಹೀಗಾದ್ದುದರಿಂದ ಕಳ್ಳರಿಗೆಲ್ಲ ತುಂಬಾ ಕೋಪಬಂದು ತಾವು ಸೇಡನ್ನು ಖಂಡಿತ ತೀರಿಸಿಕೊಳ್ಳಬೇಕೆಂದು ನಿರ್ಧಾರಮಾಡಿದರು.

ಒಂದು ವಾರದ ನಂತರ ಸಂಜೆಯಾಗುತ್ತಿದ್ದಂತೆ ಹೊರಗಿನಿಂದ ನಂದಿನಿಗೆ ಶಬ್ದ ಕೇಳಿಸಿತು. ಅದು ಕಳ್ಳರ ನಾಯಕನ ಧ್ವನಿಯೆಂದು ಗುರುತಿಸಿದ ನಂದಿನಿ ತುದಿಗಾಲಿನಲ್ಲಿ ಮೆತ್ತಗೆ ಹೋಗಿ ಅವರ ಯೋಚನೆ ಏನೆಂಬುದನ್ನು ಕೇಳಿಸಿಕೊಂಡು ಬಿಟ್ಟಳು. ಅವರು ಮಲಗಿರುವ ಕೋಣೆಗೆ ಅವರೆಲ್ಲಾ ಒಬ್ಬರ ಹಿಂದೆ ಒಬ್ಬರು ಹತ್ತಿ ಬಂದು, ಚೋಟುಲಾಲ್ ಮತ್ತು ಅವಳನ್ನು ಹಗ್ಗದಿಂದ ಕಟ್ಟಿ, ಬಾಯಿ ತುರುಕಿ. ಮನೆಯಲ್ಲಿದ್ದ ಬೆಲೆಯುಳ್ಳ ವಸ್ತುಗಳನ್ನೆಲ್ಲ ದೋಚಬೇಕೆಂದು ಉಪಾಯ ಹೂಡಿದ್ದರು. ಕಳ್ಳರ ನಾಯಕನು "ನಂದಿನಿಯು ಜಾಗ್ರತೆ ಮರೆಯಲಾಗದಂತೆ ಅವಳನ್ನು ಕಟ್ಟಿಹಾಕಲು ಗಟ್ಟಿಯಾದ ಹಗ್ಗವನ್ನು ಉಪಯೋಗಿಸುತ್ತೇನೆ." ಎಂದು ಬಡಾಯಿ ಕೊಚ್ಚಿಕೊಂಡಿದ್ದನು.

ನಂದಿನಿ ಅಡಿಗೆ ಮನೆಗೆ ಓಡಿಹೋಗಿ ಹರಿತವಾದ ಚೂರಿಯೊಂದನ್ನು ತಂದಳು. ಅನಂತರ ಕಿಟಕಿಯ ಹಿಂದೆ ಅವಿತು ನಿಂತಳು. ಕೂಡಲೇ ಅವಳಿಗೆ ತನ್ನ ಮನೆಯ ಗೋಡೆಗಳ ಮೇಲೆ ಹಬ್ಬಿದ್ದ ಬಳ್ಳಿಗಳ ಎಲೆಗಳ ಸಪ್ಪಳ ಕೇಳಿಸತೊಡಗಿತ್ತು. ಕಿಟಕಿಯೊಳಗಿಂದ ಒಂದು ಮುಖ ಇಣುಕಿತು. ತಕ್ಷಣವೆ ಹೆಡೆಯೆತ್ತಿ ಅಪ್ಪಳಿಸುವ ಹಾವಿನ ಹಾಗೆ ನಂದಿನಿ ಚಾಚಿದ್ದ ಮೂಗನ್ನು ಕತ್ತರಿಸಿದಳು. ತಲೆ ಹಿಂದಕ್ಕೆ ಹೋಯಿತು. ಕಳ್ಳ ಕೆಳಕ್ಕೆ ಹಾರಿ ಬಿದ್ದು ರಕ್ತ ಸೋರುತ್ತಿದ್ದ ತನ್ನ ಮೂಗನ್ನು ನಾಯಕನಿಗೆ ತೋರಿಸಿದ. ಆದರೆ ನಾಯಕ ಅವನು ಕತ್ತಲೆಯಲ್ಲಿ ಕೆಳಕ್ಕೆ ಹಾರುವಾಗ ಹರಿತವಾದ ಕಲ್ಲೊಂದಕ್ಕೆ ತನ್ನ ಮೂಗನ್ನು ಜಜ್ಜಿಕೊಂಡಿದ್ದರಿಂದ ಅದು ಕತ್ತರಿಸಿ ಹೋಗಿರಬೇಕೆಂದು ವಾದಿಸಿದ. ತನ್ನ ಮಾತನ್ನು ಸಮರ್ಥಿಸಲು ನಾಯಕ ತಾನೇ ಕಿಟಕಿ ಹತ್ತಿ ಹೋಗುತ್ತೇನೆಂದು ತೀರ್ಮಾನಿಸಿದ. ತೆರೆದ ಕಿಟಕಿಯಲ್ಲಿ ಮತ್ತೆ ಇನ್ನೊಂದು ಮುಖ ಕಾಣಿಸಿದೊಡನೆ ಅದರ ಮೂಗನ್ನೂ ಚೂರಿಯಿಂದ ಕತ್ತರಿಸಿಬಿಟ್ಟಳು. ಕಳ್ಳರ ನಾಯಕ ರಕ್ತ ಸೋರುತ್ತಿದ್ದ ತನ್ನ ಮೂಗನ್ನು ಹಿಡಿದುಕೊಂಡು ನೋವಿನಿಂದ ಬುಸುಗುಡುತ್ತ ಅವಳ ಮೇಲೆ ಸೇಡು ತೀರಿಸಿಕೊಳ್ಳದ ಹೊರತು ತುತ್ತು ಅನ್ನ ತಿನ್ನುವುದಿಲ್ಲವೆಂದು ಪ್ರತಿಜ್ಞೆ ಮಾಡಿದ.

ವಸಂತಋತು ಮುಗಿದು ಬೇಸಿಗೆ ಕಾಲಿಟ್ಟಿತು. ಹಗಲಿನಲ್ಲಿ ಬಿಸಿಯಾಗುತ್ತಿದ್ದರೂ ಸಾಯಂಕಾಲ ತಣ್ಣನೆಯ ಗಾಳಿ ಬೀಸಿ ಬರುತ್ತಿತ್ತು. ಚೋಟುಲಾಲ್ ಮತ್ತು ನಂದಿನಿಯರು ತಮ್ಮ ತೋಟದಲ್ಲಿ ಕಣ್ಣು ಮಿನುಕುವ ನಕ್ಷತ್ರಗಳ ಮತ್ತು ಮೃದುವಾದ ಬೆಳಕಿನ ಚಂದ್ರನ ಸಾನಿಧ್ಯದಲ್ಲಿ ಬಂದು ಮಲಗಲು ಶುರುಮಾಡಿದರು.

ಎರಡು ರಾತ್ರಿ ಹೀಗೆ ಕಳೆದ ನಂತರ ನಂದಿನಿಗೆ ಒಂದು ಕನಸು ಬಿತ್ತು. ಅವಳು ಆ ಕನಸಿನಲ್ಲಿ ಒಂದು ಒಂಟೆಯ ಮೇಲೆ ಸವಾರಿ ಮಾಡುತ್ತಿದ್ದಳು. ಅವಳ ಮುಂದೆ ಇನ್ನೊಂದು ಒಂಟೆಯ ಮೇಲೆ ಚೋಟುಲಾಲ್ ಸವಾರಿ ಮಾಡುತ್ತಿದ್ದ. ದೂರದಲ್ಲಿ ಸುಂದರ ಉಧ್ಯಾನವನಗಳು. ತಾಳೆಯ ಮರಗಳು ಕಾಣಿಸಿದವು. ಒಬ್ಬ ಸುಂದರ ರಾಜಕುಮಾರ ಬಿಳಿಯ ಕುದುರೆಯನ್ನೇರಿ

ಧಾವಿಸಿ ಬರುತ್ತಿದ್ದ. ಚಿನ್ನದಲ್ಲಿ ಕಸೂತಿ ಹಾಕಿದ ಬಿಳಿಯ ಸೀರೆಯನ್ನು ವಜ್ರ ವೈಡೂರ್ಯಗಳಿಂದ ಮಿನುಗುತ್ತಿದ್ದ ಒಂದು ಬಂಗಾರದ ಕಿರೀಟವನ್ನು ಅವಳ ಕಡೆ ನೀಡಿದ. ಅವನು ಕೊಡುತ್ತಿರುವ ಉಡುಗೊರೆಯನ್ನು ಸ್ವೀಕರಿಸಲು ತನ್ನ ಕೈಚಾಚುತ್ತಿದ್ದಂತೆಯೇ ಅವಳು ಹೌಹಾರಿ ಎಚ್ಚರವಾದಳು.

ಅವಳು ಕೆಳಗೆ ನೋಡಿದಾಗ ತಾನು ಒಂಟೆಯ ಮೇಲೆ ಸವಾರಿ ಮಾಡುತ್ತಿಲ್ಲವೆಂಬುದು ಅರಿವಾಯಿತು. ತನ್ನ ಮಂಚವನ್ನು ನಾಲ್ಕು ಜನ ಕಳ್ಳರು ಹೊತ್ತು ಕೊಂಡು ನಡೆಯುತ್ತಿದ್ದರು. ಉಳಿದವರು ಮುಂದೆ, ಮುಂದೆ ನಡೆದು ಹೋಗುತ್ತಿದ್ದರು.

ನಂದಿನಿ ಯೋಚಿಸಿದಳು. "ದೇವರೇ ನಿಜಕ್ಕೂ ನಾನು ಈ ಸಲ ಸಿಕ್ಕಿಬಿದ್ದೆ. ಇವರು ನನ್ನನ್ನು ಎಲ್ಲಿಗೆ ಹೊತ್ತುಕೊಂಡು ಹೋಗುತ್ತಾರೊ, ಏನು ಮಾಡಿಬಿಡುತ್ತಾರೋ ತಿಳಿಯಲಾರೆ. ಇವರು ಸ್ವಲ್ಪವೂ ಕರುಣೆ ತೋರಿಸುವುದಿಲ್ಲವೆಂಬುದು ಮಾತ್ರ ನನಗೆ ಖಾತ್ರಿಯಾಗಿದೆ."

ಆಗ ಅವರಲ್ಲೊಬ್ಬ ಕಳ್ಳ ಹೇಳಿದ: "ಈ ಹೆಂಗಸು ತುಂಬಾ ಭಾರ. ನನ್ನ ಭುಜ ನೋಯು ತ್ತಿದೆ. ನಾವು ಸ್ವಲ್ಪ ವಿಶ್ರಮಿಸಿ ಆ ಮೇಲೆ ಮುಂದಕ್ಕೆ ಹೋಗೋಣ." ಎಲ್ಲರೂ ಇದಕ್ಕೆ ಒಪ್ಪಿದರು. ಒಂದು ಆಲದ ಮರದ ಕೆಳಗೆ ಮಂಚವನ್ನು ಇಳಿಸಿದರು. ಮರಕ್ಕೆ ಒರಗಿ ಕೂತು ಎಲ್ಲರೂ ನಿದ್ದೆ ಹೋದರು. ಆಗ ನಂದಿನಿ ತನ್ನ ಹೊದಿಕೆಯನ್ನು ಒಬ್ಬ ವ್ಯಕ್ತಿ ಮಲಗಿರುವ ಹಾಗೆ ಕಾಣುವಂತೆ ಮಾಡಿಟ್ಟು ಹಾಸಿಗೆಯಿಂದ ಮೆಲ್ಲಗೆ ಇಳಿದು ಆಲದ ಮರ ಹತ್ತಿ ಕುಳಿತಳು.

ಅವಳ ಅದೃಷ್ಟಕ್ಕೆ ಸರಿಯಾಗಿ ಆಲದ ಮರದ ಎಲೆಗಳು ಅಗಲವಾಗಿದ್ದುದರಿಂದ ಕೊಂಬೆ ಗಳು ಕೆಳಮುಖವಾಗಿ ಇಳಿಬಿದ್ದಿದುದರಿಂದ ಅವಳಿಗೆ ಸುರಕ್ಷಿತ ಆಶ್ರಯ ಸಿಕ್ಕಿದಂತಾಯಿತು. ಒಂದು ಕೊಂಬೆಯ ಮೇಲೆ ಕೂತು ಅವಳು ಕಳ್ಳರನ್ನು ನೋಡಿದಳು. ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋಗಲು ಅವಳಿಗೆ ಅತ್ಯುತ್ತಮ ಉಪಾಯವೊಂದು ತಟ್ಟನೆ ಹೊಳೆಯಿತು. ತನ್ನ ಮುಖ ವನ್ನು ಅವಳು ಕಪ್ಪುಶಾಲಿನಿಂದ ಮುಚ್ಚಿಕೊಂಡು ತನ್ನ ಕೈಗಳನ್ನು ಬಿಳಿ ಬಟ್ಟೆಯೊಳಗೆ ಅಡಗಿಸಿ ಕೊಂಡಳು. ಆಮೇಲೆ ಕೈಗಳನ್ನು ಬಡಿಯುತ್ತ ವಿಚಿತ್ರವಾದ ಧ್ವನಿಯಲ್ಲಿ ಜೋರಾಗಿ ಕಿರುಚಲು ಪ್ರಾರಂಭಿಸಿದಳು.

ಕಳ್ಳರು ಎಚ್ಚರಗೊಂಡು ದಿಗಿಲಿನಿಂದ ತಮ್ಮ ಸುತ್ತಮುತ್ತ ನೋಡಿದರು. ರಾತ್ರಿಯ ಮೌನ ವನ್ನು ಒಂದು ಭಯಾನಕ ಧ್ವನಿ ಸೀಳುತ್ತಿತ್ತು. ಕಳ್ಳರು ತಟ್ಟನೆ ಮೇಲಕ್ಕೆದ್ದು ನೋಡಿದರು. ಬಡಿದುಕೊಳ್ಳುತ್ತಿರುವ ಬಿಳಿಯ ಕೈಗಳ ಕಪ್ಪನೆಯ ಮುಖದ ಪಿಶಾಚಿಯೊಂದು ಮರದ ಮೇಲಿ ನಿಂದ ತಮ್ಮ ಕಡೆಗೇ ನೋಡುತ್ತಿತ್ತು. "ಈ ಮರದ ಮೇಲೆ ವಾಸಿಸುತ್ತಿರುವ ಭೂತ ಇದು.

ಇದಕ್ಕೆ ನಮ್ಮಿಂದ ತೊಂದರೆಯಾಗಿ ಕೋಪ ಬಂದುಬಿಟ್ಟಿದೆ." ಎಂದು ಅವರು ಪರದಾಡುತ್ತ ಎದ್ದು ಹಿಂದಕ್ಕೆ ತಿರುಗಿ ನೋಡದೆಯೂ ಅಲ್ಲಿಂದ ಒಂದೇ ಸಮನೆ ಓಡಿಬಿಟ್ಟರು.

ನಂದಿನಿಗೆ ಇದನ್ನು ಕಂಡು ನಗು ತಡೆಯಲಾಗಲಿಲ್ಲ. ಅವಳು ತನ್ನ ವಸ್ತುಗಳನ್ನೆಲ್ಲ ತೆಗೆದು ಕೊಂಡು ಕಟ್ಟಕಡೆಯ ಕಳ್ಳ ಕಣ್ಮರೆಯಾದದ್ದು ಖಚಿತವಾದ ಮೇಲೆ ನಗುನಗುತ್ತ ತನ್ನ ಮನೆಯತ್ತ ಕಡೆ ನಡೆದಳು.



Printed at Shagun Offset. Quality Printer, New Delhi-66.